# ಕನ್ನಡ ರಘುವಂಶ

ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.

ಮುನ್ನುಡಿ :
ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

ಶಾರದಾ ಮಂದಿರ
ಕೃಷ್ಣರಾಜವನಂ, ಮೈಸೂರು

ಕನ್ನಡ ಕವಿಕಾವ್ಯಮಾಲೆ---೨೫

# ಕನ್ನಡ ರಘುವಂಶ

ಮಣೌ ವಜ್ರ ಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ—ಕಾಳಿದಾಸ

ಎಸ್. ವಿ. ಪರಮೇಶ್ವರಭಟ್ಟ, ಎಂ. ಎ.

ಶಾರದಾ ಮಂದಿರ
ಕೃಷ್ಣರಾಜವನಂ ಮೈಸೂರು

*Editor and Publisher*
H. M. SHANKAR NARAYAN RAO, M.A.
*Assistant Professor*
*and Head of the Department of Kannada*
*Sarada Vilas College, Mysore*

ಮೊದಲ ಮುದ್ರಣ ೧೯೫೫



**ಬೆಲೆ : ಸಾಧಾರಣ ಪ್ರತಿ ೪-೦-೦**
**ಕ್ಯಾಲಿಕೊ ಪ್ರತಿ ೬-೦-೦**

ಮುದ್ರಕರು :
ಜಿ. ಎಚ್. ರಾಮರಾವ್, ಬಿ. ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್
ಮೈಸೂರು

# ಮುನ್ನುಡಿ

ಕಾಳಿದಾಸನು ಸುಪ್ರಸಿದ್ಧನಾದ ಸಂಸ್ಕೃತ ಕವಿ; ಭಾರತೀಯ ಕವಿಗಳಲ್ಲಿ ಅಗ್ರಪಂಕ್ತಿಗೆ ಸೇರಿರತಕ್ಕವನು; ಅವನಿಗಿಂತ ಮಾಘ ಶ್ರೀಹರ್ಷ ಮುಂತಾದ ಕವಿಗಳಿಗೆ ಹೆಚ್ಚಿನ ಗೌರವ ಸಲ್ಲುತ್ತಿದ್ದ ಕಾಲ ಒಂದಿತ್ತು. ಆದರೆ ಈಗ ಅಭಿರುಚಿ ಅಭಿಪ್ರಾಯಗಳು ಬದಲಾಗಿವೆ. ಕಾಳಿದಾಸನು ಶ್ಲೇಷ ಯಮಕಾನುಪ್ರಾಸಗಳನ್ನಿಟ್ಟು ಪಂಡಿತ ಪ್ರೀತಿಯಾಗುವಂತೆ ಬರೆಯಬಲ್ಲನು; ಆದರೆ ಅವರ ಮೇಲೆ ಅವನಿಗೆ ಮೋಹವಿಲ್ಲ. ಸಹಜವಾಗಿ ಸರಳಸುಂದರವಾಗಿ ಬರೆಯುವುದರಲ್ಲಿ ಕಾಳಿದಾಸನು ಎತ್ತಿದ ಕೈ. ಅವನು ಎಷ್ಟು ಸರಳವಾಗಿ ಬರೆಯುತ್ತಾನೆಂದರೆ, ಇಂದಿಗೂ ಅವನ ರಘುವಂಶವನ್ನು ಬಾಲಪಾಠವಾಗಿ ಹೇಳಿಕೊಡುತ್ತಾರೆ—ಮಕ್ಕಳಿಗೆ ಹಸುವಿನ ಹಾಲನ್ನು ಕುಡಿಸುವಂತೆ. ಸರಳವಾದದ್ದಕ್ಕೂ ಸುಲಭವಾದದ್ದಕ್ಕೂ ಎಲ್ಲರಿಂದಲೂ ಯಾವಾಗಲೂ ಗೌರವ ಸಲ್ಲುವುದಿಲ್ಲ. ಮೋದಕಪ್ರಿಯನು ಮೆಚ್ಚದಿದ್ದ ಮಾತ್ರಕ್ಕೆ ಹಾಲಿಗೂ ಹಸುವಿಗೂ ಬೆಲೆ ಕಡಮೆಯಾದೀತೇ? ಹಾಲು ಬಾಲರಿಗೂ ಬೇಕು, ವೃದ್ಧರಿಗೂ ಬೇಕು.

ಭಾರತೀಯ ಶ್ರೇಷ್ಠ ಕವಿಯಾದ—ಅಥವಾ ಕೆಲವೇ ಶ್ರೇಷ್ಠ ಕವಿಗಳಲ್ಲಿ ಒಬ್ಬನಾದ—ಶ್ರೇಷ್ಠ ವಿಶ್ವಕವಿಗಳ ಪಂಕ್ತಿಯಲ್ಲಿ ಗಣ್ಯನಾಗಿರುವ ಕಾಳಿದಾಸನ ಕಾವ್ಯಗಳನ್ನು ಪರಿಚಯ ಮಾಡಿಕೊಳ್ಳದಿರುವ ಭಾರತೀಯನು ವಿದ್ಯಾವಂತನೆನ್ನಿಸಿಕೊಳ್ಳಲಾರನು. ಆದರೆ ಅವು ಸಂಸ್ಕೃತದಲ್ಲಿವೆ. ಸಂಸ್ಕೃತವು ಕನ್ನಡಕ್ಕೆ ಅಷ್ಟೇನೂ ದೂರವಲ್ಲ; ಇಂಗ್ಲಿಷ್ ಭಾಷೆಯನ್ನು ಕಲಿಯಲು ಪಡಬೇಕಾದ ಶ್ರಮದಲ್ಲಿ ನೂರನೆಯ ಒಂದು ಪಾಲು ಶ್ರಮ ಪಟ್ಟರೂ ಕಾಳಿದಾಸನ ಕಾವ್ಯಗಳನ್ನು ಸವಿಯಬಲ್ಲಷ್ಟು ಸಂಸ್ಕೃತವನ್ನು ಕಲಿಯಬಹುದು. ಆದರೆ ಈಗ ಅನ್ನ ಬಟ್ಟೆಗಳಿಗಾಗಿ, ಧನಕನಕಗಳಿಗಾಗಿ, ಜೀವನನ್ನು ತೆಯ್ಯಬೇಕಾದ ಕಾಲ ಬಂದಿದೆ; ಹಣಕ್ಕೆ ಬೆಲೆ ಬಂದಿದೆ, ಕಾಲಕ್ಕೆ ಕ್ಷಾಮ ಬಂದಿದೆ. ಸಂಸ್ಕೃತದ ಓದು ನಾನಾ ಕಾರಣಗಳಿಂದ ಹಿಂಪೆ ಬಿದ್ದಿದೆ.

ಕನ್ನಡ ಸಾಹಿತ್ಯ ಹುಟ್ಟಿ ಬೆಳೆದಿರುವುದು ಸಂಸ್ಕೃತದ ಹಿನ್ನೆಲೆಯಲ್ಲಿ. ಕಾಳಿದಾಸನ ಕಾವ್ಯಗಳನ್ನು ಓದದಿರುವ ಹಳಗನ್ನಡ ಕವಿಯಿಲ್ಲ. ಅವನ ಹೆಸರನ್ನು ಒಬ್ಬಿಬ್ಬರು ಹೇಳಿದ್ದರೂ ಮಿಕ್ಕವರು ಅವನ ಭಾವಗಳನ್ನು ಎಷ್ಟೋ ಕಡೆ ತೆಗೆದುಕೊಂಡಿದ್ದಾರೆ; ಶ್ಲೋಕಗಳನ್ನು ಕನ್ನಡಿಸಿಕೊಂಡಿದ್ದಾರೆ. ಆದರೆ ಅವನ ಕಾವ್ಯಗಳನ್ನಾಗಲಿ ನಾಟಕಗಳನ್ನಾಗಲಿ ಕನ್ನಡಿಸಬೇಕೆಂಬ ಯೋಚನೆ ಅವರಾರಿಗೂ ಬಂದ ಹಾಗಿಲ್ಲ. ಪ್ರಾಯಶಃ, ಇದಕ್ಕೆ ಒಂದು ದೊಡ್ಡ ಕಾರಣ, ಹಿಂದಿನ ಕನ್ನಡ ಕವಿಗಳು ಮತ್ತು ವಿದ್ಯಾವಂತರೆನ್ನಿಸಿಕೊಂಡವರೆಲ್ಲರೂ, ಸಾಮಾನ್ಯವಾಗಿ ಸಂಸ್ಕೃತವನ್ನು ತಿಳಿದೇ ಇದ್ದು, ಕಾಳಿದಾಸನ ಕಾವ್ಯನಾಟಕಗಳನ್ನು ಮೂಲದಲ್ಲೇ ಓದುತ್ತಿದ್ದದ್ದು. ಭಾಷಾಂತರವು ಭಾಷಾಂತರವೇ. ಎಷ್ಟು ಚೆನ್ನಾಗಿ ಮಾಡಿದ್ದಾಗಲಿ, ಅದು ಮೂಲದಷ್ಟು ಸುಂದರವಾಗಿ ಬರುವುದಿಲ್ಲ. ಸಾಹಿತ್ಯಕ್ಕೆ ವಿಷಯರೂಪವಾದ ಒಳಮೈಯೂ ಭಾಷಾಶೈಲಿರೂಪವಾದ ಹೊರಮೈಯೂ ಇರುತ್ತವೆ. ಇವು 'ವಾಗರ್ಥ'ಗಳಂತೆ ಏಕಜೀವವಾಗಿ ಹೊಂದಿಕೊಂಡಿರುತ್ತವೆ; ಇವನ್ನು ಬೇರೆ ಮಾಡಲಾಗುವುದಿಲ್ಲ. ಗದ್ಯಕಾವ್ಯವಾದರೆ ಅದರ ಕಥೆಯನ್ನು ಬಸಿದು ಬಹುಮಟ್ಟಿಗೆ ವಿಷಯವನ್ನು ದೊರಕಿಸಿಕೊಡಬಹುದು. ಪದ್ಯಕಾವ್ಯದಲ್ಲಿ ವಿಷಯವೆಷ್ಟು ಮುಖ್ಯವೋ ಪ್ರತಿಪಾದನೆಯೂ ಅಷ್ಟೇ ಮುಖ್ಯ. ಆದ್ದರಿಂದಲೇ 'ರೀತಿರಾತ್ಮಾ ಕಾವ್ಯಸ್ಯ' ಎಂಬ ಹೇಳಿಕೆ ಇಂದಿಗೂ ಬಹುಮಟ್ಟಿಗೆ ಸತ್ಯವಾಗಿದೆ.

ಮೂಲವನ್ನು ಓದಬಲ್ಲ ಪ್ರಾಪ್ತಿ ಎಲ್ಲರಿಗೂ ಇರುವುದಿಲ್ಲ. ಅಂಥವರು ಭಾಷಾಂತರದಿಂದ ಆದಷ್ಟು ತೃಪ್ತಿಹೊಂದಬೇಕು, ಸಂತೋಷಪಡೆಯಬೇಕು. ಉತ್ತಮಭಾಷಾಂತರಕಾರರು ಎರಡು ಭಾಷೆಗಳಲ್ಲೂ ಪಂಡಿತರಾಗಿದ್ದು, ರಸಿಕರಾಗಿದ್ದು, ಅವುಗಳ ಜೀವಾಳವನ್ನು ಅರಿತವರಾಗಿದ್ದು, ಮೂಲದ ಬಣ್ಣ, ಛಾಯೆ, ಕಾಂತಿ, ಕೆಡದಂತೆ, ಅಥವಾ ಆದಷ್ಟು ಹೆಚ್ಚು ಪ್ರಮಾಣ ಭಾಷಾಂತರದಲ್ಲಿಯೂ ಬರುವಂತ ತರಬಲ್ಲವರಾಗಿರಬೇಕು. ಈ ಕೆಲಸ ಒಂದು ಕುಟುಂಬಕ್ಕೆ ಸೇರಿದ ಭಾಷೆಗಳಾದರೆ—ಭಾಷಾಶಾಸ್ತ್ರದೃಷ್ಟಿಯಿಂದಲ್ಲ ಸಹವರ್ತನೆಯ ದೃಷ್ಟಿಯಿಂದ, ಪೋಷ್ಯಪೋಷಕ ದೃಷ್ಟಿಯಿಂದ--ಸ್ವಲ್ಪ ಸುಲಭವಾಗುತ್ತದೆ. ಹೀಗೆ ಸಂಸ್ಕೃತದ ಸ್ವಾರಸ್ಯವನ್ನೂ

ರೂಢಿಯನ್ನೂ ಇಂಗ್ಲಿಷಿನಲ್ಲಿ ಹೇಳುವುದು ಕಷ್ಟ. ಹೆಚ್ಚು ಬೇಡ, 'ಚಂದ್ರಮುಖಿ' 'ಪಾದಕಮಲ' ಎಂಬುದನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿದರೆ ವಿಕಾರವಾಗುತ್ತದೆ; ಭಾವಾನುವಾದ ಮಾಡಿದರೆ ಭಾಷಾಂತರವಾಗುವುದಿಲ್ಲ. ಸಂಸ್ಕೃತಭಾಷೆಗೆ ನೈಜವಾಗಿರುವ ನಾದಮಾಧುರ್ಯವೇ ಬೇರೆ, ಇಂಗ್ಲಿಷ್ ಭಾಷೆಗೆ ನೈಜವಾಗಿರುವ ನಾದಮಾಧುರ್ಯವೇ ಬೇರೆ. ಆದರೆ, ಸಂಸ್ಕೃತಕ್ಕೂ ಕನ್ನಡಕ್ಕೂ—ಇವು ಬೇರೆ ಬೇರೆ ಭಾಷಾವರ್ಗಗಳಿಗೆ ಸೇರಿದ್ದರೂ—ಹತ್ತಿರದ ಸಂಬಂಧವಿದೆ; ಆದ್ದರಿಂದ ಹೆಚ್ಚಿನ ಸೌಕರ್ಯವಿದೆ. ಸಂಸ್ಕೃತದ ಎಷ್ಟೋ ಮಾತುಗಳು ಕನ್ನಡದ ಕೋಶವನ್ನು ತುಂಬಿವೆ.—ಗದ್ಯಕ್ಕಿಂತ ಪದ್ಯದಲ್ಲಿ ಆಗಲೇ ತುಂಬಿಕೊಂಡು ಬಂದಿವೆ. ಇಂದಿಗೂ ಅವನ್ನು ಕನ್ನಡ ಪದ್ಯಕವಿತೆಯಲ್ಲಿ ತುಂಬಿ ಬರೆದರೆ ಯಾರೂ ಆಕ್ಷೇಪಿಸುವುದಿಲ್ಲ.—ಅನೇಕ ವೇಳೆ ಅವು ಆವಶ್ಯಕವೂ ಅಪೇಕ್ಷಣೀಯವೂ ಆಗಿರುತ್ತವೆ. ಆದರೆ ಛಂದಸ್ಸಿನ ಮಾತು ಬೇರೆ. ಸಂಸ್ಕೃತಸಾಹಿತ್ಯದ ಮುಕ್ಕಾಲು ಮೂರುವೀಸಪಾಲೆಲ್ಲಾ ರಚಿತವಾಗಿರುವ ಅನುಷ್ಟುಪ್ಪು ಅಥವಾ 'ಶ್ಲೋಕ'ವೇ ಕನ್ನಡಕ್ಕೆ ಹೊಂದಿಕೊಳ್ಳಲಿಲ್ಲ—ಹಳಗನ್ನಡ ಗ್ರಂಥರಾಶಿಯನ್ನೆಲ್ಲಾ ಹುಡುಕಿದರೂ ಕ್ಲೇಶಪಟ್ಟು ಬರೆದದ್ದು ನಾಲ್ಕೋ ಆರೋ ಸಿಕ್ಕಿಯಾವು. ಕೆಲವು ದೊಡ್ಡ ಸಂಸ್ಕೃತ ವೃತ್ತಗಳೂ ಉತ್ಪಲಮಾಲಾದಿ ಆರು "ಖ್ಯಾತ ಕರ್ಣಾಟಕ" ವೃತ್ತಗಳೂ ರೂಢಿಯಾಗಿ ಬಳಕೆಗೆ ಬಂದುವು. ಇವೂ ಚಂಪೂಗ್ರಂಥಗಳಲ್ಲಿಯೇ.—ಅವೇ ಹಳಗನ್ನಡದಲ್ಲಿ ಹೆಚ್ಚು. ವೀರಶೈವ ಕಾಲದಿಂದ ಮುಂದೆ ಹಾಡು ವೃತ್ತಗಳುಳ್ಳ—ದ್ರಾವಿಡ ಛಂದಸ್ಸಿನ—ಕಾವ್ಯಗಳೇನೋ ಬಂದುವು. ಆ ರೂಢಿ ಬಂದ ಮೇಲೆ ಅವುಗಳ ಸಂಖ್ಯೆಯೂ ಹೆಚ್ಚಾಯಿತು. ಆದರೆ ಅದರ ವಿಚಾರ ಪ್ರಕೃತವಲ್ಲ. ಪ್ರಕೃತವಾದದ್ದೇನೆಂದರೆ, ಕಾಳಿದಾಸಾದಿ ಶ್ರೇಷ್ಠಕವಿಗಳ ಕಾವ್ಯಗಳಲ್ಲಿ ಅರ್ಥ ಸೌಂದರ್ಯ ಎಷ್ಟು ಮುಖ್ಯವೋ ಭಾಷಾ ಸೌಂದರ್ಯವೂ ಅಷ್ಟೇ ಮುಖ್ಯ, ಅವುಗಳನ್ನು ತುಂಬಿಟ್ಟಿರುವ ಛಂದಸ್ಸೂ ಅಷ್ಟೇ ಮುಖ್ಯ. ಸಂಸ್ಕೃತ ಶ್ಲೋಕಗಳನ್ನು ಹೇಳುವ ಕೇಳುವ ಬಹುಮಟ್ಟಿನ ಸೌಖ್ಯ ಅವುಗಳ ವಾಗ್ಗುಂಫನದಿಂದ, ಛಂದಸ್ಸಿನ ಗಾಂಭೀರ್ಯದಿಂದ. ಇದರ ಸೌಂದರ್ಯವನ್ನು ಭಾಷಾಂತರದಲ್ಲಿ ತರಬೇಕಾದರೆ ಆಯಾ ವೃತ್ತದ ಹತ್ತಿರಕ್ಕೆ ಬರುವ ಕನ್ನಡ ಛಂದಸ್ಸನ್ನಾದರೂ ಆರಿಸಿಕೊಳ್ಳಬೇಕು; ಅಂಥ ಹಿಂದಿನವು ಸಿಕ್ಕದಿದ್ದರೆ, ಹೊಸದಾಗಿ ಕಲ್ಪಿಸಿಕೊಳ್ಳಬೇಕು.

ಹಿಂದೆ, ಎಸ್. ಜಿ. ನರಸಿಂಹಾಚಾರ್ಯರು, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು, ಎಂ. ಕೃಷ್ಣಪ್ಪನವರು ಮುಂತಾದವರು ರಘುವಂಶ ಮೇಘ ಸಂದೇಶಾದಿಗಳನ್ನು ಷಟ್ಪದಿಗಳಲ್ಲಿಯೇ ಚೆನ್ನಾಗಿ ಭಾಷಾಂತರ ಮಾಡಿದ್ದಾರೆ. ಆದರೆ, ನನಗೇನೋ 'ಅಥ ಪ್ರಜಾನಾಮಧಿಪಃ ಪ್ರಭಾತೇ ಜಾಯಾಪ್ರತಿ ಗ್ರಾಹಿತ ಗಂಧಮಾಲ್ಯಾಂ' ಎಂಬುದನ್ನಾಗಲಿ 'ತೇ ಚ ಪ್ರಾಪುರುದನ್ವಂತಂ ಬುಬುಧೇ ಚಾದಿಪೂರುಷಃ' ಎಂಬುದನ್ನಾಗಲಿ ಷಟ್ಪದಿಯಲ್ಲಿ ಓದಿದರೆ ಪೇಲವವಾಗಿ ಕಾಣುತ್ತದೆ.

ಶ್ರೀಮಾನ್ ಪರಮೇಶ್ವರಭಟ್ಟರು ಈ ಅಂಶಗಳನ್ನೆಲ್ಲಾ ಬಲ್ಲವರಾಗಿ ರಘುವಂಶವನ್ನು ಕನ್ನಡಿಸುವುದಕ್ಕೆ ಕೈಹಾಕಿದ್ದಾರೆ. ಇದಕ್ಕೆ ಮೊದಲೇ ಋತುಸಂಹಾರ ಮೇಘಸಂದೇಶ ಕುಮಾರಸಂಭವಗಳನ್ನು ಕನ್ನಡಿಸಿ ಅವರ ಕೈ ಕುದುರಿದೆ. ಅವರು ಕನ್ನಡ ಸಂಸ್ಕೃತ ಎರಡು ಭಾಷೆಗಳ ಇಂಪನ್ನೂ ಬಲ್ಲವರಾಗಿ ಪದಗಳನ್ನು ಔಚಿತ್ಯದಿಂದ ಬಳಸಿದ್ದಾರೆ. ಛಂದಸ್ಸನ್ನು—ಬಗೆಬಗೆಯಾದ ಹಳೆಯ ಹೊಸ ಛಂದಸ್ಸನ್ನು—ಬಳಸಿಕೊಂಡಿದ್ದಾರೆ. ಅವುಗಳಿಂದ ಗ್ರಂಥಕ್ಕೆ ಕಳೆ ಬಂದಿದೆ ಎಂದು ನಾನು ತಿಳಿದಿದ್ದೇನೆ. ಅವುಗಳ ಸ್ವರೂಪ ಲಕ್ಷಣ ಔಚಿತ್ಯಗಳನ್ನೆಲ್ಲಾ ಇಲ್ಲಿ ತಿಳಿಸಲು ಪ್ರಯತ್ನಪಟ್ಟರೆ ಮುನ್ನುಡಿ ಲಂಬಿಸುತ್ತದೆ.

ಕಾಳಿದಾಸನು ದೊಡ್ಡಕವಿ, ವರಕವಿ. ಅಂಥವನ ಕಾವ್ಯವನ್ನು ವ್ಯಾಸಂಗಮಾಡುವುದಕ್ಕೂ, ಸ್ವಾರಸ್ಯವನ್ನು ಸವಿಯುವುದಕ್ಕೂ, ಕೂಡ ಒಂದು ಅಧಿಕಾರ ಬೇಕು. ನಾನು ಈಗ್ಗೆ ಐವತ್ತು ವರ್ಷಗಳಿಗಿಂತ ಹಿಂದೆಯೇ ರಘುವಂಶವನ್ನು ಓದಲು ಆರಂಭಿಸಿದೆ. ಇಂದಿಗೂ ಆಗಾಗ್ಗೆ ಓದುತ್ತಿದ್ದೇನೆ—ಓದಿದಾಗಲೆಲ್ಲಾ ಹೊಸ ಸೊಗಸು ಕಾಣುತ್ತದೆ. ಇಂಥ ಕಾವ್ಯವನ್ನು ಆತುರದಲ್ಲಿ ಕನ್ನಡಿಸಿದರೆ ಕವಿಗಾಗಲಿ ಕನ್ನಡಿಗರಿಗಾಗಲಿ ಕನ್ನಡಿಸಿದವರಿಗಾಗಲಿ ನ್ಯಾಯ ಸಂದಂತಾಗುವುದಿಲ್ಲ ಪ್ರಕೃತ ಗ್ರಂಥದಲ್ಲಿ—ಸುದೀರ್ಘವಾದ ಗ್ರಂಥದಲ್ಲಿ ಅಲ್ಲಲ್ಲೇ ಕೆಲವು ಪದ್ಯಗಳು ಹೀಗೆ ಆತುರದಲ್ಲಿ ಬರೆದಂತೆಯೋ, ಸರಿಯಾದ ಹದಕ್ಕೆ ಬಾರದಂತೆಯೋ, ಕಂಡರೂ ಒಟ್ಟಿನ ಮೇಲೆ ಭಾಷಾಂತರವು ತುಂಬ ಚೆನ್ನಾಗಿದೆಯೆಂದು ಯಾರಾದರೂ ಒಪ್ಪಿಕೊಳ್ಳಲೇ ಬೇಕು. ಈ ಪದ್ಯಗಳನ್ನು ನೋಡಿ :—

೧. ಕುಲಪತಿ ತೋರಿಸಿದೆಲೆವನೆಯೊಳು ಆ ನರಪ ದಿಲೀಪನು ಪುಗುತಂದು
ಪತ್ನಿ ಸುದಕ್ಷಿಣೆಯೊಡನೆ ಕುಶಾಂಕುರ ತಲ್ಪದೊಳಿರುಳನು ತಾಂ ಕಳೆದು
ಶಿಷ್ಯರ ವೇದಾಧ್ಯಯನದ ಘೋಷವೆ ಐತಿ ಕೊನೆಗೊಂಡುದ ಸಲೆ ತಿಳಿದು
ಮುದದಿಂ ಸತಿವೆರಸೊಡನೆಳ್ಚೆತ್ತನು ನೇಸರಿನುದಯದೊಳಂತಂದು ॥

೨. ಕರುವಿಡದ ಹಂಬಿಡಿದು ಕಂದಮೂಲವನುಂಡು ದಿನವು ಸೇವಿಸುತ ನಡೆದು
ವಿದ್ಯೆಯನು ಅಭ್ಯಾಸಬಲದಿಂದಲೆಂತಂತು ಹಸುವನಿವನೊಲಿಯಬಹುದು ॥

೩. ಅಸಿಯುಳಾದರು ಸೀಸು ಕೊಡಸೀರನೊಲಿದೆರೆದು
ಬೆಳೆಸಿರುವ ಈ ಮಾವಿನೆಳಸಸಿಗಳಿಂದೆ
ಮತ್ತೆ ಮೊಗವೆತ್ತಿರುವ ಹರಿಣವೃಂದಗಳಿಂದೆ
ಪಂಚವಟಿ ಬಹುದಿನಕೆ ಮುದವೀಯುತಿಹುದು ॥

೪. ಜನನಿಯರ ಆನಂದಜಲದಿಂದ ಮೊದಲಾದ
ರಘುವಂಶಕೇತುವಿನ ಅಭಿಷೇಕವದನು
ವೃದ್ಧಮಂತ್ರಿಗಳಂದು ಹೊಂಗೊಡಗಳಲಿ ತಂದ
ತೀರ್ಥಾಂಬುವನ್ನೆರೆದು ಮುಗಿಸಿದರು ನಲಿದು ॥

೫. ಹೊಳೆಕಡಲುಕೊಳಗಳಿಂದುದಕವನು ಮೊಗೆಮೊಗೆದು
ಮುಂಗರಕ್ಕಸರೊಡೆಯರೆಲ್ಲರುಂ ತಂದು
ಜಿಷ್ಣುವಿನ ನೆತ್ತಿಯೊಳು ಸುರುವಿದರು ಮೋಡಗಳು
ವಿಂಧ್ಯಗಿರಿಮೂರ್ಧ್ನಿಯೊಳು ಮಳೆಗರೆವವೋಲು.

ಇದಕ್ಕಿಂತ ಚೆನ್ನಾಗಿ ಈ ಪದ್ಯಗಳ ಮೂಲ ಸಂಸ್ಕೃತ ಶ್ಲೋಕಗಳನ್ನು ಕನ್ನಡಿಸುವುದು ಹೇಗೆ? ಇವು ಓದುವುದಕ್ಕೆ ಹಿತವಾಗಿವೆ, ಕಿವಿಗೆ ಇಂಪಾಗಿವೆ, ಭಾವಸಂಪತ್ತಿನಿಂದಲೂ ಭಾಷಾಸಂಪತ್ತಿನಿಂದಲೂ ರಮ್ಯವಾಗಿವೆ. ಕನ್ನಡಿಗರು ಈ ಸುಂದರ ಗ್ರಂಥವನ್ನು ಓದಿ ಸಂತೋಷವನ್ನೂ ಪ್ರಯೋಜನವನ್ನೂ ಪಡೆದಾರೆಂದು ನಂಬುತ್ತೇನೆ.

ಬೆಂಗಳೂರು
೩–೬–೧೯೫೫

ಎ. ಆರ್. ಕೃಷ್ಣಶಾಸ್ತ್ರೀ

# ಕೃತಜ್ಞತೆ

‘ ಕನ್ನಡ ರಘುವಂಶ ’ ದ ಪ್ರಕಟನೆಯೊಂದಿಗೆ ಶ್ರೀ ಎಸ್. ವಿ. ಪರಮೇಶ್ವರಭಟ್ಟರ ಕಾಳಿದಾಸನ ಕಾವ್ಯಗಳ ಅನುವಾದ ಕಾರ್ಯ ಮುಗಿದಂತಾಗುತ್ತದೆ ಈ ಕೃತಿಯನ್ನು ನಾನು ಸಂತೋಷದಿಂದ ಪ್ರಕಟಿಸುತ್ತಿದ್ದೇನೆ. ಪ್ರಿಯಗುರುಗಳಾದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ಅಮೂಲ್ಯವಾದ ಮುನ್ನುಡಿಯಿಂದ ನಮ್ಮನ್ನು ಹರಸಿದ್ದಾರೆ. ನಮ್ಮಿಬ್ಬರನ್ನೂ ಪ್ರೀತಿಯಿಂದ ಕಂಡು, ಕೈಹಿಡಿದು ನಡೆಸಿದ ‘ ಕರುಣಾಳು ಬೆಳಕು ’ ದಿವಂಗತ ಶ್ರೀ ತಳುಕಿನ ವೆಂಕಣ್ಣಯ್ಯನವರಿಗೆ ಕೃತಿ ಅರ್ಪಿತವಾಗಿರುವುದು ನನಗೆ ತುಂಬ ತೃಪ್ತಿಯನ್ನುಂಟುಮಾಡಿದೆ.

ಶ್ರೀ ವೆಂಕಣ್ಣಯ್ಯನವರ ಪಡಿಯಚ್ಚನ್ನು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯ ಕಾರ್ಯದರ್ಶಿಗಳು ಕೊಟ್ಟಿದ್ದಾರೆ. ಗ್ರಂಥವನ್ನು ಮಿತ್ರ ಶ್ರೀ ಜಿ. ಎಚ್. ರಾಮರಾಯರು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ.

ಈ ನನ್ನ ಹಿತೈಷಿಗಳಿಗೆಲ್ಲ ಅನಂತ ವಂದನೆಗಳು.

ಶಾರದಾಮಂದಿರ
ಕೃಷ್ಣರಾಜವನಂ
ಮೈಸೂರು
೩೦-೬-೫೫

**ಎಚ್. ಎಂ. ಶಂಕರನಾರಾಯಣರಾವ್,**
ಸಂಪಾದಕ

ಪ್ರಿಯ ಗುರುಗಳಾದ

**ಶ್ರೀ ತಳುಕಿನ ವೆಂಕಣ್ಣಯ್ಯನವರಿಗೆ**

ಕನ್ನಡವನೋದಿಸಿದಿರೆನ್ನೊಳಂದಕ್ಕರೆಯನೆರೆದು ಪಾಲ್ಸವಿಯ
ಮುಡುಪಿದನು ಕೊಳುವುದಿಂದಾಕೃಪೆಯ ಬಲದೊಳನುವದಿಸಿದೀ ಕೃತಿಯ.

## ಅರಿಕೆ

ಶ್ರೀಶಾನುಗ್ರಹವೂ ಗುರುಜನಕೃಪೆಯೂ ಒದಗಿ ಬಂದುದರ ಫಲವಾಗಿ ಕಾಳಿದಾಸ ಮಹಾಕವಿಯ ಕಾವ್ಯಗಳೆಲ್ಲವನ್ನೂ ಕನ್ನಡಿಸುವ ಕಾರ್ಯ ಈ ಕೃತಿಯ ಪ್ರಕಾಶನದೊಂದಿಗೆ ಮುಗಿದಂತಾಯಿತು. ನನ್ನ ಪೂಜ್ಯ ಗುರುಗಳಾದ ಶ್ರೀ. ಕೃಷ್ಣಶಾಸ್ತ್ರಿಗಳವರು ಈ ಕೃತಿಯನ್ನು ಮೊದಲು ಓದಿ ತಮ್ಮ ಪ್ರೀತಿ ವಿಶ್ವಾಸಪೂರ್ವಕವಾದ ಮುನ್ನುಡಿಯ ಮಲ್ಲಿಗೆಯನ್ನು ಮುಡಿಸಿ ಹರಸಿ ಕಳುಹಿದ್ದಾರೆ. ದೊಡ್ಡವರ ಈ ಅನುಗ್ರಹದಿಂದಾಗಿ ನಾನು ಧನ್ಯನಾಗಿದ್ದೇನೆ. ಈ ಸಂದರ್ಭದಲ್ಲಿ ಈ ನನ್ನ ಗುರುಗಳಿಗೆ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ. ಹಿರಿಯರ ಮೆಚ್ಚಿಕೆಗೆ ಹರಕೆಗೆ ಪಾತ್ರನಾಗುವ ಯೋಗ್ಯತೆ ದಿನದಿನಕ್ಕೆ ನನ್ನಲ್ಲಿ ಬೆಳೆಯಲಿ ಎಂದು ಭಗವಂತನಲ್ಲಿ ನನ್ನ ನಮ್ರ ಪ್ರಾರ್ಥನೆ.

ನನ್ನ ಈ ಅನುವಾದಕಾರ್ಯವನ್ನು ಮೊದಲಿನಿಂದಲೂ ಮೆಚ್ಚಿ ಪ್ರೋತ್ಸಾಹಿಸಿ ಹೀಗೆ ಅಂದವಾದ ಪುಸ್ತಕ ರೂಪದಲ್ಲಿ ಪ್ರಕಟವಾಗುವುದಕ್ಕೆ ಕಾರಣರಾಗಿರುವ ಎಲ್ಲ ಸಹೃದಯರಿಗೂ ನನ್ನ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ.

ಮಹಾರಾಜರವರ ಕಾಲೇಜು     **ಎಸ್. ವಿ. ಪರಮೇಶ್ವರಭಟ್ಟ**
ಮೈಸೂರು
೧೦-೬-೫೫

## ಪರಿವಿಡಿ



### ಕನ್ನಡ ರಘುವಂಶ

# ಕನ್ನಡ ರಘುವಂಶ

## ಮೊದಲನೆಯ ಸರ್ಗ

## ವಸಿಷ್ಠಾಶ್ರಮಾಭಿಗಮನ

೧

ವಾಗರ್ಥದಂತನಿಶವೊಡವೆರೆದು ಶೋಭಿಸುವ ಜಗದ ತಾಯ್‌ತಂದೆಯರನು
ಪಾರ್ವತೀಪರಮೇಶ್ವರರ್ಕಳನು ವಾಗರ್ಥದರಿವಿಗೆಂದೆರಗಿದಪೆನು.

೨

ಸೂರ್ಯನಿಂದೊಗೆದ ಕುಲವೆತ್ತಣದು ಅಲ್ಪವಿಷಯಜ್ಞಮತಿಯೆತ್ತಣದಿದು?
ಮೋಹದಿಂದೆಳಸಿದೆನು ದುಸ್ತರದ ಸಾಗರವ ತೆಪ್ಪದೊಳು ದಾಂಟಲೆಂದು.

೩

ಕವಿಯ ಜಸವನು ಬಯಸಿದೆಗ್ಗನಿರದಿಂದು ನಾನಪಹಾಸ್ಯಕೆಡೆಯಾದೆನು
ಉನ್ನತನಿಗೆಟುಕಲಿಹ ಫಲಕೆಳಸಿ ಕೈನೆಗಪಿದಾಕುಳ್ಳಗೆಣೆಯಾದೆನು.

೪

ಅಲ್ಲದಿರೆ ಪೂರ್ವಸೂರಿಗೆಳೆಸಗಿದೊಂದು ವಾಗ್ದ್ವಾರದೊಳು ಸರಿದು ಸಂದು
ಬೆಜ್ಜದಿಂದಣಿಗೈದ ಮಣಿಗಣದೊಳಿಹ ಸೂತ್ರದಂತೆನ್ನ ಗತಿಯಪ್ಪುದು.

೫

ಜನನಾದಿಯಿಂದಮಳರಾದರನು, ಫಲ ದೊರಕುವನ್ನೆವರಮೆಸಗುವರನು,
ಕಡಲವರೆಗಿರುವಿಳೆಯನಾಳ್ವರನು, ತೇರಿನೊಳು ದಿವಿಯವರೆಗೈದುವರನು,

೬

ವಿಧ್ಯುಕ್ತ ಹೋಮಾಗ್ನಿಯುಳ್ಳರನು, ತಪ್ಪಿತಕೆ ತಗುವನಿತೆ ದಂಡಿಪರನು,
ಬೇಳ್ಪನಿತನೆರೆದವರಿಗೀವರನು, ಕಾಲಕ್ಕೆ ತಕ್ಕೈಳ್ಚರಿರ್ದಪರನು,

೭

ತ್ಯಾಗಕೆಂದೈಸಿರಿಯ ಗಳಿಪರನು, ದಿಟಕೆಂದೆ ಮಿತವಚನವುಳ್ಳವರನು,
ಜಸಕೆಂದೆ ಜಯವನೆಳಸಿರ್ಪರನು, ಸಂತಾನಕೆಳಸಿ ಗೃಹಿಯಾದವರನು,

೮

ಬಾಲ್ಯದೊಳು ವಿದ್ಯೆಗಳಿಸಿರ್ದರನು, ಹರಯದೊಳು ವಿಷಯಸುಖಕಿಚ್ಛಿಪರನು
ಮುಪ್ಪಿನೊಳು ಮುನಿವೃತ್ತಿಯುಳ್ಳರನು, ಯೋಗದಿಂದಂತ್ಯದೊಳು
ಮೈಯನುಳಿವರನು,

೯

ಅಲ್ಪವಾಗ್ವಿಭವನಾಗಿರ್ದೊಡಂ ತದ್ಗುಣಗಳೆನ್ನ ಕಿವಿವೊಕ್ಕವೆಂದು
ಚಾಪಲ್ಯ ಚೋದಿಸಿರಲಾ ಮಹಾರಘುರಾಜರನ್ವಯವನೊರೆವೆನಿಂದು.

೧೦

ಗುಣದೋಷಮಂ ಪೇಳ್ವ ಸತ್ಪುರುಷರೀಕೃತಿಯನಾಲಿಸಲ್ಕರ್ಹರಹುದು
ಕಾಂಚನದ ಶುದ್ಧತೆಯೊ ಕಾಳಿಮೆಯೊ ತೋರ್ದಪುದು ಬೆಂಕಿಯೊಳ
ಗುರುಹಿದಂದು.

೧೧

ವೇದಗಳಲೋಂಕಾರವೆಂತಂತು ಬುಧನೂನನೀಯನೆನಿಸಿರ್ದ ನೃಪನು
ಖ್ಯಾತ ವೈವಸ್ವತನು ಆ ಮಹೀಪಾಲರೊಳು ಮೊದಲಿಗನು ತಾನಿರ್ದನು.

೧೨

ಆ ನಿರ್ಮಲಾನ್ವಯದೊಳೊಗೆದನು ದಿಲೀಪನೆನುವತ್ಯಂತ ಪರಿಶುದ್ಧನು
ಇಂಗಡಲಿನಿಂದಲೊಗೆದೈತಂದ ಇಂದುವೊಲು ರಾಜೇಂದುವೆಸೆದಿರ್ದನು.

೧೩

ಅಗಲವಾದೆದೆಯವನು ಸಾಲದಂತುನ್ನತನು ವೃಷಭಭುಜಶಿರನು ನೃಪನು
ನಿಜಕರ್ಮಕೊಪ್ಪುವೊಂದಂಗದಿಂದಾಕ್ಷಾತ್ರ ಧರ್ಮದವೊಲವನಿರ್ದನು.

೧೪

ರೂಪಕೊಪ್ಪುವ ಬುದ್ಧಿ ಬುದ್ಧಿಗನುಗುಣವೆನಿಸುವಾಗಮಜ್ಞತೆಯೆಸೆವುದು
ಆಗಮಜ್ಞತೆಗೆಣೆಯ ಆರಂಭವಾರಂಭಕೆಣೆಯ ಫಲಸಿದ್ಧಿಯಿಹುದು.

೧೫

ಎಲ್ಲವನು ಮೀರಿಸುವ ಬಲದಿಂದಲೆಲ್ಲವನು ಕಡೆಗಣಿಪ ತೇಜದಿಂದೆ
ಎಲ್ಲಕಿಂತೆತ್ತರದ ತನುವಿಂದಲುರ್ವಿಯನು ಮೀರಿದನು ಮೇರು ತೆರದೆ.

೧೬

ಭೀಮಕಾಂತಂಗಳಾದರಸುಗುಣಗಣಗಳಿಂದಾಶ್ರಿತರಿಗುರ್ವೀಶನು
ಜಲಜಂತುರತ್ನಗಳನಾಂತಬ್ಧಿವೋಲಧೃಷ್ಯನುಮಹನು ಸೇವ್ಯನುಂ ಆಹನು.

೧೭

ಮನುಮಾರ್ಗಮಂ ತ್ಯಜಿಸದೊರ್ಗೆರೆಯನಾದೊಡಂ ತುಳಿಯದಿಹರಿವನ ಜನರು
ಉತ್ತಮನಿಯಂತಾರ ನಡೆಯಿಸುವ ತೇರ್ಗಾಲಿ ಜಾಡನಿನಿಸುಳಿಯದವೊಲು.

೧೮

ಜನರೆಲ್ಲರೇಳಿಗೆಯ ನೆನೆದೆ ದಲ್ ಕಾಣಿಕೆಯ ಕೊಂಡನು ದಿಲೀಪ ನೃಪನು
ಮತ್ತೆ ಸಾಸಿರ್ಮಡಿಯನೊಲಿದೀಯಲೆಂದೆ ದಲ್ ರವಿ ನೀರನೀಂಟಿದಪನು.

೧೯

ಶಾಸ್ತ್ರದೊಳಕುಂಠಿತಪ್ರಜ್ಞೆಯೊಂದಾ ಧನುವಿಗೇರಿಸಿದ ಮೌರ್ವಿಯೊಂದು
ಅರ್ಥಸಾಧನಗಳೀ ದ್ವಯಗಳಿಗೆ ಉಪಕರಣಮಾತ್ರದೊಲು ಪಡೆಯಿರ್ದುದು.

೨೦

ತನ್ನೊಳಗ ತೋರದೆಯೆ ಮುಖಚರ್ಯೆಯನು ಮುಚ್ಚಿ ಹೃದ್ಗತದ ಹೊಲಬುಗೊಡದೆ
ನೃಪನುಪಾಯಂಗಳು ಫಲಾನುಮೇಯಂಗಳಾ ಪೂರ್ವಸಂಸ್ಕಾರದವೊಲು.

೨೧

ಗಳಿಸಿದನು ಧರ್ಮವನನಾತುರನು, ದೇಹವನು ರಕ್ಷಿಸಿದನತ್ರಸ್ತನು,
ನಿರ್ಲೋಭನರ್ಥವನು ಗಳಿಸಿದನು, ಸುಖವನನುಭವಿಸಿದನನಾಸಕ್ತನು.

೨೨

ಜ್ಞಾನದೊಳು ಮೌನವನು, ಶಕ್ತಿಯೊಳು ಸಹನೆಯನು, ತ್ಯಾಗದೊಳು ನಿಃಸ್ತುತಿಯನು,
ಕೂಡಿಸಿರಲವಿರೋಧದಿಂದಿರುವ ಗುಣಗಳಿವು ಒಡಹುಟ್ಟುಗಳತೆರದೊಲಿಹವು.

೨೩

ವಿಷಯಸುಖವಶವರ್ತಿಯೆನಿಸದನು ವಿದ್ಯೆಗಳ ತುಟ್ಟತುದಿ ಮುಟ್ಟಿದವನು
ಧರ್ಮರತನಾದವನು ಜರೆಯಿಲ್ಲದೊಂದು ವೃದ್ಧಿತ್ವವನು ಪಡೆದನವನು.

೨೪

ಪ್ರಜೆಗಳೆಲ್ಲರ ನಿತ್ಯಭರಣಶಿಕ್ಷಣರಕ್ಷಣಾದಿಗಳನೆಸಗಿದಂದು
ನೃಪನೆ ದಲ್ ತಂದೆಯೆನೆ ಜನ್ಮಕಾರಣ ಮಾತ್ರರಹುದು ನಿಜಜನಕರವರು.

೨೫

ಸ್ಥಿತಿಗೆಂದೆ ದಂಡ್ಯರನು ದಂಡಿಸನು, ಸಂತಾನಕೆಂದೆ ಸತಿಯರ ಪಡೆವನು,
ಬುಧನೊಳಾ ಅರ್ಥಕಾಮಂಗಳುಂ ಧರ್ಮಪುರುಷಾರ್ಥಕೆಂದಿರ್ಪುದೈಸೆ !

೨೬

ಬೇಳ್ವೆಗೆಂದಿಳೆಯನು ನೃಪಾಲಕನು, ಬೆಳೆಗೆಂದು ನಾಕವನು ದೇವೇಂದ್ರನು,
ಹಿಳಿಯುತಿರ್ವರುಮುಭಯಲೋಕವನು ಸಿರಿಯ ಕೊಳುಕೊಡೆಯಿಂದೆ
ಪೋಷಿಸಿದರು.

೨೭

ಪೊರೆಯುತಿರುವರಸಿನ ನೆಗಳ್ತೆಯನು ಅನುಕರಿಸದಿರ್ದರಂದನ್ಯನೃಪರು
ಪೆರರೊಡವೆಯೊಳು ಸಲದೆ ‘ ಕಳವು ’ ವಾಚಕಶಬ್ದ ಗತಮಾತ್ರ
ಮಾದುದೆನಲು.

೨೮

ಹಗೆಯಾದರೂ ಸರಿಯೆ ರೋಗಿಗೌಷಧದಂತೆ ಒಳ್ಳಿದನು ಹಿತವನಹನು,
ಪ್ರಿಯನಾದರೂ ಸರಿಯೆ ಹಾವಗಿದ ಬೆರಳವೊಲು ಕೆಟ್ಟವನು ತ್ಯಾಜ್ಯನಹನು.

೨೯

ಬ್ರಹ್ಮನು ದಿಲೀಪನನು ಪೃಥ್ವ್ಯಾದಿ ಭೂತಕಾರಣವಸ್ತುಪರಿಕರದೊಳು
ಸೃಜಿಸಿರ್ದನಲ್ಲದೊಡೆ ಗುಣಗಳವು ತಾಂ ಪರಾರ್ಥೈಕಪರಮುಪ್ಪುದೇತು !

೩೦

ಕಡಲೆ ಪೇರಗಳೆನಲು ಕಡಲ ದಡವದುವೆ ದಲ್ ಮದಿಲೆನಲು ಮೆರೆವಿಳೆಯನು
ಪೊಳಲೊಂದನೆಂತಂತೆ ಶಾಸಿಸಿದನನ್ಯರಾಜಾಜ್ಞೆ ತಾನಿಲ್ಲದುದನು.

೩೧

ಅವನ ಸತಿ ದಾಕ್ಷಿಣ್ಯಗುಣಯುತಳು ವರಮಗಧವಂಶದೊಳು ಹುಟ್ಟಿದವಳು
ಆ ಸುದಕ್ಷಿಣೆಯಿರ್ದಳಧ್ವರವ ಬೆಳಗುತಿಹ ಹೆಸರಾಂತ ದಕ್ಷಿಣೆವೊಲು.

೩೨
ಭಾವಿಸಿದನಂತವುರದರಸಿತಿಯರಧಿಕ ಜನರಿರ್ದೊಡಂ ತನ್ನನೆಂದು
ಆ ಮನಸ್ವಿನಿ ಮತ್ತೆ ಲಕ್ಷ್ಮಿಯರಿನಾ ನೃಪನು ಸಲೆ ಸಪತ್ನೀಕನೆಂದು.

೩೩
ಆತ್ಮಾನುಗುಣಸತಿಯೊಳಾ ಸುದಕ್ಷಿಣೆಯೊಳಂದಾತ್ಮಜನ್ಮನನು ತಾನು
ಪಡೆಯುವ ಕುತೂಹಲದೊಳಾ ಬಯಕೆಯಾಸೆಯೊಳು ಕಾಲವನು
ಕಳೆಯುತಿಹನು.

೩೪
ಧರಣಿಪನು ಬಳಿಕ ಸಂತಾನಾರ್ಥಮಾದನುಷ್ಠಾನಗಳನೆಸಗಲೆಂದು
ನಿಜಭುಜದಿನಿಳುಹಿಸಿದ ಜಗದ ಗುರುಭಾರವನು ಸಚಿವರೊಳಗಿರಿಸಿರ್ದನು.

೩೫
ಪುತ್ರಕಾಮನೆಯಿಂದಲಾ ಬಳಿಕ ದಂಪತಿಗಳಿರ್ವರುಂ ಶುದ್ಧರೆನಿಸಿ
ಬ್ರಹ್ಮನನು ಭಕ್ತಿಯಿಂದರ್ಚಿಸುತೆ ಗುರು ವಸಿಷ್ಠಾಶ್ರಮಕೆ ಹೊರವಂಟರು.

೩೬
ಮಧುರತರ ಗಂಭೀರ ಘೋಷದ ವರೂಥವನು ನಲಿದೇರಿ ಹೊರವಂಟರು
ಸೆಳೆಮಿಂಚು ಸುರಗಜಗಳೇರಿ ನಡೆವಂದದೊಳು ಮಳೆಗಾಲದಂಬುದವನು.

೩೭
ಪೀಡೆ ತಗದಾಶ್ರಮಕ್ಕೆಂದು ಮಿತಪರಿವಾರದೊಡಗೂಡಿ ತೆರಳಿದವರು
ಸೇನೆಯಿಂದಾವೃತರವೋಲಿರ್ದರನುಭಾವದತಿಶಯದೊಳಂದು ಮೆರೆದು.

೩೮
ಸಾಲಪರಿಮಳವೆರೆದು ವನರಾಜಿಯನು ತೊನೆದು ಹೂಹುಡಿಯ ಹರಹಿ ತಂದು
ಸೋಂಕಿಗಿನಿದೆನೆ ಸುಳಿದು ತಣ್ಣಸೆಯ ತೆಳುಗಾಳಿ ಸೇವಿಸಿದುದವರನಂದು.

೩೯
ರಥದ ನೇಮಿಯ ದನಿಯನಾಲಿಸುತೆ ಮೊಗವೆತ್ತಿ ಷಡ್ಜವನು ಹೋಲುತಿರುವ
ನವಿಲುಗಳ ಇರ್ತೆರದ ಕೇಕೆಯನು ದಂಪತಿಗಳಾಲಿಸುತಲೈತಂದರು.

೪೦

ಗಂಡು ಹೆಣ್ಣೆರಳೆಗಳು ತೇರು ಬಳಿ ಬಂದೊಡನೆ ದಾರಿಯನು ಬಿಟ್ಟು ಸರಿದು
ನೋಡುತ್ತೆ ನಿಂದಂದು ತೆರಳಿದರು ತಮ್ಮ ಕಣ್ಣುಗಳ ಹೋಲಿಕೆಯ ನೆನೆದು.

೪೧

ಕಂಬವನು ನಿಲಿಸದೆಯೆ ಕಟ್ಟಿರುವ ತೋರಣದ ಮಾಲೆಯೊಲು ಮೆರೆವ
ಸಾಲ್ವಿಡಿದ ಕಲರವದ ಸಾರಸವ ನೋಡಿದರು ದಂಪತಿಗಳೆತ್ತಿ ಮೊಗವ.

೪೨

ಪ್ರಾರ್ಥನಾಸಿದ್ಧಿಯನು ಸೂಚಿಸುತಲನುಕೂಲ ಮಾರುತನು ಸುಳಿಯುತಿರಲು
ತೆರಳಿದರು ತುರಗಗಳ ಧೂಳು ಸಲೆ ಕವಿಯದಿಹ ಮುಂಗುರುಳು ಹಾರುತಿರಲು.

೪೩

ದಾರಿ ಬಳಿ ಕೆರೆಗಳೊಳು ತೆರೆತೆರೆಯ ತುರುಗಲೊಳು ತಣ್ಪಿಡಿದು ಸುಳಿವೆಲರನು
ಸವಿದು ನಲಿದೈದಿದರು ತಮ್ಮುಸಿರಿಗೆಣೆಯೆನಿಪ ತಾವರೆಯ ನರುಗಂಪನು.

೪೪

ಯೂಪಚಿಹ್ನಗಳಿರುವ ತಾನೆ ದತ್ತಿಯ ಬಿಟ್ಟ ಹಳ್ಳಿಗಳಲಂದು ನೆರೆದು
ಯಾಜಕರು ಕೊಟ್ಟರ್ಘ್ಯವನು ಪಡೆದು ಗೈದ ನಲ್ವರಕೆಗಳನಾಂತು ನಡೆದು;

೪೫

ಆಗಳೆಯೆ ಕಾಯಿಸಿದ ನರುನೆಯ್ಯನೊಯ್ದು ತರುವಾ ಗೊಲ್ಲ ಮುದುಕರಿಂದೆ
ದಾರಿಯಲಿ ಬೆಳೆದಿರುವ ಕಾಡುಮರಗಳಿಗಿರುವ ಹೆಸರುಗಳ ಕೇಳಿ ತಿಳಿದು ;

೪೬

ಪರಿಶುದ್ಧವೇಷರವರೈದುತಿರಲೊಂದಧಿಕ ಶೋಭೆಯೊಳು ಮೆರೆದರಂದು
ಚಿತ್ರೆಯುಂ ಚಂದ್ರನುಂ ಹಿಮವಳಿದಹುಣ್ಣಿಮೆಯೊಳೊಡವೆರೆದವೋಲಿರ್ದರು.

೪೭

ಸೌಮ್ಯದರ್ಶನನಂತು ನಿಜಕಾಂತೆಗದನದನು ತೋರಿಸುತಲೈದುವಂದು
ಪಥವೆನಿತು ಕಳೆದಿರುವುದೆನುವುದನು ಅರಿಯನು ಬುಧೋಪಮನು
ಭೂಪಾಲನು.

೪೮

ದುಷ್ಪ್ರಾಪಯಶನು ಮಹಿಷೀಸಖನು ಮೇಣ್‌ಶ್ರಾಂತವಾಹನನು ಭೂಪಾಲನು
ಸಂಜೆಯೊಳು ತಾನಂದು ಸಂಯಮಿ ಮಹರ್ಷಿಯ ತಪೋವನವನ್ನೈತಂದನು.

೪೯

ತಾಂ ಸಮಿತ್‌ಕುಶಫಲಂಗಳನು ಕೊಂಡಾ ವನಾಂತರದಿಂದೆ ಮರಳುತಿರುವ
ಆ ಅದೃಶ್ಯಾಗ್ನಿಯಿಂದಿದಿರ್ಗೊಂಡರೆನಲೊಡನೆ ಒಳವೊಕ್ಕ ಮುನಿಗಳಿರುವ ;

೫೦

ಆಲವಾಲಾಂಬುವನು ಕುಡಿವ ಹಕ್ಕಿಗಳೊಂದು ನಂಬುಗೆಯ ಗಳಿಸಲೆಂದು
ಸೇಕಾಂತದೊಳು ಸರಿದು ಮುನಿವಧುಗಳುಳಿದಿರುವ ವೃಕ್ಷಮೂಲಂಗಳಿರುವ ;

೫೧

ಬೈಗು ಬಿಸಿಲಾರುತಿರೆ ಗುಡ್ಡೆಗೈದಿರುವ ಆ ನೀವಾರರಾಶಿಯೆಡೆಯೆ
ಎಲೆವನೆಯ ಅಂಗಳದೊಳೆರಳೆವಿಂಡೊಲಿದಾಡಿ ಮಲಗಿ ಮೆಲುಕಾಡುತಿರುವ;

೫೨

ಉರಿಗೊಳಿಸಿದಗ್ನಿಯನು ಸೂಚಿಸುವ ಹೋಮಗೈದಾಹುತಿಯ ಕಂಪನುಗುವ
ಗಾಳಿಯಲಿ ಬೀಸಿಬಹ ಹೊಗೆಯಂದು ಆಶ್ರಮಕ್ಕೈದುವನ ಶುಚಿಗೊಳಿಸುವ.

೫೩

ಬೊಗಸೆ ನೀವಾರಗಳನೊಲಿದು ಮೆಲುವಾತುರದೊಳೆಲೆಮನೆಯ
ಬಾಗಿಲಿನೊಳು
ರಿಸಿವೆಣ್ಗಳಕ್ಕರೆಯ ಮಕ್ಕಳೋಲಡ್ಡವಿರುವೆರಳೆವಿಂಡೆಸೆಯುತಿರುವ.

೫೪

ಧರಣಿಪನು ಬಳಿಕ ಯಂತಾರನನು ಕುದುರೆಗಳ ದಣಿವಾರಿಸೆಂದೊರೆದನು
ಕೈಗೊಟ್ಟು ತೇರಿನಿಂದಿಳುಹಿದನು ಮಡದಿಯನು ತಾನುಮಾಬಳಿಕಿಳಿದನು.

೫೫

ಮಡದಿಯೊಡನೈತಂದ ಪರಮ ಸಂಪೂಜ್ಯನನು ನಯಚಕ್ಷುವೆನಿಸಿದನನು
ಸಭ್ಯರು ಜಿತೇಂದ್ರಿಯರು ಮುನಿಜನಗಳರ್ಚಿಸಿದರಾ ಪರಮರಕ್ಷಕನನು.

೫೬

ಸಂಜೆಯ ಅನುಷ್ಠಾನದಾ ಬಳಿಕ ಸ್ವಾಹಾನ್ವಿತಾಗ್ನಿವೋಲೆಸೆವವನನು
ಸತಿ ಅರುಂಧತಿ ಸೇವಿಸಾ ತಪೋನಿಧಿಯನು ದಿಲೀಪನವಲೋಕಿಸಿದನು.

೫೭

ಆ ರಾಜರಾಣಿಯರು ಅವರುಗಳ ಪದಕಮಲಗಳಿಗೊಲಿದು ನಮಿಸಿದಂದು
ಪ್ರೀತಿಯಿಂದಾಗುರುವಸಿಷ್ಠನುಮರುಂಧತಿಯುಮವರುಗಳ ಮನ್ನಿಸಿದರು.

೫೮

ತೇರ ಕುಲುಕಾಟದುರುಬಳಲಿಕೆಯನತಿಥಿಸತ್ಕಾರದೊಳು ಕಳೆದವನನು
ಕುಶಲವನು ಕೇಳಿದನು ಮುನಿವರನು ರಾಜ್ಯವೆನುವಾಶ್ರಮಮುನೀಶ್ವರನನು.

೫೯

ಆ ಬಳಿಕ ಸಾರ್ಥವಚನಂಗಳನು ವಿಜಿತಾರಿಪುರನು ವಾಚಾಲವರನು
ಅರ್ಥಪತಿ ನುಡಿದನು ದಿಲೀಪಭೂಪಾಲಕನಥರ್ವನಿಧಿ ಸನ್ನಿಧಿಯೊಳು.

೬೦

ಮಾನುಷದ ದೈವಿಕದ ಆಪದಗಳೆಲ್ಲವನು ನೀಂ ನಿವಾರಿಸುತಲಿರಲು
ನನ್ನ ಈ ಸಪ್ತರಾಜ್ಯಾಂಗದೊಳು ಮಂಗಳಂ ದಲ್ ಮೂಡಿ ಬೆಳಗುತಿಪುದು.

೬೧

ಹೇ ಮಂತ್ರವೇತ್ತಾರ! ದೂರದೊಳೆ ಹಗೆಗಳನು ತೊಡೆವ ತವಮಂತ್ರದೆದುರು
ಪ್ರತ್ಯಕ್ಷ ಲಕ್ಷ್ಯವನು ಭೇದಿಸುವ ನನ್ನ ಶರವಾಂತಿಪುದು ನಿರಸನವನು.

೬೨

ನೀಂ ಯಥಾವಿಧಿಯಿಂದಲಗ್ನಿಯೊಳು ಹವನಗೈದಾಜ್ಯಾದಿ ಹವಿನಿಚಯವು
ಮಳೆ ಬರದೆ ಒಣಗಿರುವ ಬೆಳೆಗಳನು ಹೋತ್ರ ಕೇಳೋವಿ ತಾಂ
ಮಳೆಗರೆವುವು.

೬೩

ತಾಂ ನಿರಾತಂಕರು ನಿರೀತರು ಶತಾಯುಷರು ನನ್ನ ಆ ಸರ್ವ ಜನರು
ಆ ಎಲ್ಲ ಸೌಖ್ಯಕೆ ನಿಮಿತ್ತಮೀ ಬ್ರಹ್ಮತೇಜಮೆ ವಲಂ ಹೇ ಮಮ ಗುರು!

೬೪

ಬ್ರಹ್ಮವಂಶೋದ್ಭವನೆ ಗುರುವರನೆ ನನ್ನ ಶುಭಚಿಂತನದೊಳಿರಲು ನೀನು
ನನ್ನ ಸಂಪದಗಳೆಡೆವಿಡದೆ ತಾಮಾಪದಗಳಿಲ್ಲದೊಲು ಬೆಳೆಯವೇನು !

೬೫

ಈ ನಿನ್ನ ಸೊಸೆ ಸುದಕ್ಷಿಣೆಯೊಳನುರೂಪಸಂತಾನವನು ಕಾಣದಿಹೆನು
ಮುದಗೊಳಿಸದದರಿಂದಲಿನ್ನಿತರ ಸದ್ವೀಪವೇದಿನಿಯುಮೀಯೆನ್ನನು.

೬೬

ಪಿಂಡವಿಚ್ಛೇದನವನೆನ್ನ ಸಮನಂತರದೊಳಾ ಪಿತೃಗಳೂಹಿಸುವರು
ಶ್ರಾದ್ಧದೊಳು ತೃಪ್ತಿಯಪ್ಪಂತುಣರು ತಾಂ ಸ್ವಧಾಸಂಗ್ರಹಾಸಕ್ತರಹರು.

೬೭

ನನ್ನನಂತರದೊಳಿದು ದೊರೆವುದಸದಳವೆಂದು ನಾನೀವ ಜಲವನಿಂದು
ಪೂರ್ವಜರು ನಿಟ್ಟುಸಿರ್ಗರೆದು ನಸುಬೆಚ್ಚುಗಾಮುದಕವನು ಕುಡಿವರಹುದು.

೬೮

ಯಜ್ಞ ಶುದ್ಧಾತ್ಮನುಂ ಸಂತಾನಲೋಪದುಃಖಾತ್ಮನುಂ ಆದ ನಾನು
ಬೆಳಕು ಕಳ್ತಲೆಗಳಿಂ ತಳ್ತ ಲೋಕಾಲೋಕದಾ ಅಚಲದಂತಿರ್ಪೆನು.

೬೯

ವರತಪೋದಾನಂಗಳಿಂದೊಗೆದ ಪುಣ್ಯದೊಳು ಪರದ ಸುಖಮಾತ್ರವಹುದು
ಶುದ್ಧವಂಶದೊಳೊಗೆದ ಸಂತತಿಯಿನಿಹಪರಗಳೆರಡರಲು ಸುಖವಪ್ಪುದು.

೭೦

ನೇಹದಿಂದುದವೆರೆದು ಬೆಳೆಯಿಸಿರುವೆಲೆವನೆಯ ಗಿಡು ಬಂಜೆಯಾದ ತೆರದೆ
ಸಂತಾನಹೀನನಾದೆನ್ನನಿಂದೆಂತು ನಿಶ್ಚಿಂತೆಯಿಂ ನೋಳ್ಪಯ್ ವಿಧಾತ್ರಾ !

೭೧

ನೀರಾಟಕೆಳಸುತಿರುವಾನೆಗಾಲಾನವೆಂತುಮ್ಮಳವನೀವುದಂತು
ಪಿತೃಋಣವದೆನಗಿಂದಸಹ್ಯಪೀಡೆಯನೀವುದೋವೊ ಭಗವಂತ ತಿಳಿಯಯ್!

೭೨

ತಾತ ಕೇಳಾ ಋಣವಿಮೋಚನೆಯ ಮಾರ್ಗವನು ನನಗರುಹಲರ್ಹ ನೀವು
ಇಕ್ಷ್ವಾಕು ಭೂಮಿಪರ ದುಷ್ಪ್ರಾಪ್ಯಮಾದರ್ಥಸಿದ್ಧಿ ದಲ್ ತ್ವದಧೀನವು.

೭೩

ಬಿನ್ನವಿಸಲೀತೆರದೊಳವನಿಪನು ಕಣ್ಮುಚ್ಚಿ ಮುನಿವರನು ಜಾನಿಸಿದನು
ಮೀಂಗಳೊಂದಿನಿಸುಮಲುಗದೆ ನಿಂದ ಮಡುವಿನೊಂದಂದದೊಳು
ತಾನಿರ್ದನು.

೭೪

ಬಳಿಕ ವಾಸಿಷ್ಠಮುನಿ ಭೂಪತಿಯ ಸಂತತಿ ಪ್ರತಿಬಂಧಕಾರಣವನು
ಧ್ಯಾನದಿಂದಾಭಾವಿತಾತ್ಮನರಿತವನಿಪತಿಗೊರೆಯಲಂದನುವಾದನು.

೭೫

ಅಂದೊರ್ಮೆ ಸುರಪತಿಯನೋಲೈಸುತುರ್ವಿಗೆಂದೈದುತಿರುವವಸರದೊಳು
ನೀಂಬರುವ ದಾರಿಯೊಳು ಸುರತರುಚ್ಛಾಯೆಯೊಳು ಆ ಸುರಭಿ
ಮಲಗಿರ್ದಳು.

೭೬

ಈ ಋತುಸ್ನಾತೆಯನು ರಾಣಿಯನು ಧರ್ಮಲೋಪದ ಭಯದೊಳಂದು ನೆನೆದು
ಸುರಭಿಯನು ಆ ವಂದನಾರ್ಹಳನು ನಿಂದು ನೀಂ ವಂದಿಸದೆ ಬಂದೆಯಹುದು.

೭೭

ನನ್ನ ನೀನಾವೊಂದು ಕತದೆ ಕಡೆಗಣಿಸಿದೆಯೊ ಅದರಿಂದೆ ಮುಂದೆ ನಿನಗೆ
ನನ್ನ ಕರು ನಂದಿನಿಯನರ್ಚಿಸದೆ ಸುತರಾಗದಿರಲೆಂದು ಶಪಿಸಿತ್ತೈ ಕೊನೆಗೆ.

೭೮

ಆಗ ಕೇಳಾಕಾಶಗಂಗೆಯೊಳಗುದ್ದಾಮ ದಿಗ್ಗಜವು ದನಿಗೈಯಲು
ನೀಂ ಕೇಳ್ದುದಿಲ್ಲದರ ಶಾಪವನು ಒಡನಿರ್ದ ಸಾರಥಿಯುಮದನರಿಯನು.

೭೯

ದೊರೆಯೆ ನೀಂ ತಿಳಿವುದಂದೆಸಗಿದವಮಾನದಿಂದಿಷ್ಟಾರ್ಥಕೆಡರಾದುದು
ಏಳಿಗೆಯೆ ತಡೆಯಪ್ಪುದರ್ಚಿಸದೆ ಪೂಜ್ಯರನು ಮೀರಿ ಮರೆತೈದಿದಂದು.

೮೦

ವರುಣಕೈಕೊಂಡಿಹನು ಬಹುದೊಡ್ಡ ಯಾಗವನು ಹವಿಯನೊಲಿದೀವೆನೆಂದು
ಬಾಗಿಲೊಳು ಹಾವುಗಳು ಕಾದಿರುವ ಪಾತಾಳಲೋಕದಳು ಸುರಭಿಯಿಹಳು.

೮೧

ಆ ಹಸುವಿನೆಡೆಯೊಳವಳಣುಗಿಯನು ನಂದಿನಿಯನೊಳ್ಪಗೆಯೊಳೊಲಿದು ನೀನು
ಮಡದಿಯೊಡನರ್ಚಿಸಲು ಕರೆವಳಾಮೋದವಡೆದವಳು ನಿನ್ನಾಸೆಗಳನು.

೮೨

ಹೋತೃ ತಾನಿಂತೆಂದು ನುಡಿಯುತಿರುವನಿತರೊಳು ಹವಿಯ ಮುನಿವರನಿಗೆರೆವ
ತುರುವು ಅನವದ್ಯೆ ನಂದಿನಿಯೆನುವಳೈತಂದಳಡವಿಯಿಂದಾಶ್ರಮವನು.

೮೩

ಬೆಳ್ಳನೆಯ ನಸುಕೆಂಕಿದೆಳೆರೋಣೆಗಳಿಲೆಗೆಂಪು ನುಣ್ಣನೆಯ ಹಣೆಯೊಳಿಸೆಯೆ
ಪೊಚ್ಚಪೊಸ ಪೆರೆಯನಾಂತೆಸೆವ ಮುಚ್ಚಂಜೆಯೊಲು ಮೆರೆವಾವು ಬಂತು ಬಳಿಯೆ.

೮೪

ಬಂದ ತುರುವವಭೃತದ ಮೀಹಕಿಂ ಮಿಗಿಲು ಪರಿಶುದ್ಧವೆನುವಂಥ ಬೆಚ್ಚನೆಯ
ಕರು ಕಂಡು ಸೋರೆಬಿಡುವ ಕೊಡಮೊಲೆಯ ಪಾಲ್ಗೆರದು ತೋಯಿಸಿದು ದೆಲೆವನೆಯ ಇಳೆಯ.

೮೫

ವರತೀರ್ಥ ಜಲದಿಂದೆ ಪರಿಶುದ್ಧಿಗೈವಂತೆ ಖುರಪುಟದ ರಜಕಣಗಳಿಂದೆ
ದೊರೆಯ ಮೈಯನು ಸೋಂಕಿ ಪೂತಗೊಳಿಸುತ ಬಂದುದಾ ಮುನಿಯ ಹೋಮಧೇನು.

೮೬

ಶಕುನವನು ಬಲ್ಲವನು ಆ ತಪೋನಿಧಿ ನೋಡಿ ವರಪುಣ್ಯ ದರ್ಶನೆಯನು
ಯಜ್ಞಗೈವವನಿಪನೊಳಾ ಸಫಲನಿಜಮನೋರಥನೃಪನೊಳಿಂತೆಂದನು.

೮೭

ತುರುವ ಹೆಸರುಚ್ಚರಿಸಿದನಿತರೊಳೆ ಕಲ್ಯಾಣಿ ನಿಂದಿತೆನೆ ಬಳಿಯೊಳಿಂದು
ನಿನ್ನ ಮನದಿಷ್ಟಾರ್ಥ ಸಿದ್ಧಿಸುವುದರಸ ತಿಳಿಯಿನ್ನಿರದು ದೂರವೆಂದು.

೮೮

ತುರುವಿದರ ಬೆಂಬಿಡಿದು ಕಂದಮೂಲವನುಂಡು ದಿನವು ನೀನಿಂತು ನಡೆದು
ವಿದ್ಯೆಯನು ಅಭ್ಯಾಸಬಲದಿಂದಲೆಂತಂತು ಹಸುವನಿದನೊಲಿಯಬಹುದು.

೮೯

ತುರು ನಡೆಯಲಿದರೊಡನೆ ನೀಂ ನಡೆದು ನಿಲ್ಲಲಿದು ನೀನುಮಂತೊಡನೆ ನಿಂತು
ತುರು ಕುಡಿಯಲಿದರೊಡನೆ ನೀಂ ಕುಡಿದು ಕುಳಿತುಕೊಳೆ ನೀನುಮಂತೊಡನೆ ಕುಳಿತು.

೯೦

ಉಪಚರಿಸು ನೀನಿದನು ನಿನ್ನರಸಿ ಕಟ್ಟೆರಕದಿಂದರ್ಚಿಸುತ್ತಲಿರಲಿ
ಎಲೆವನೆಯಕೊನೆಯ ಗಡಿವರೆಗಿದನು ಬೀಳ್ಕೊಂಡು ಸಂಜೆಗಿರದೆದುರುಗೊಳಲಿ.

೯೧

ಧೇನು ನಿನಗೊಲಿವನ್ನೆವರಮಿಂತು ಪರಿಚರ್ಯದೆಸಕದೊಳು ತೊಡಗು ನೀನು
ವಿಘ್ನಗಳು ಬರದಿರಲಿ ತಂದೆವೊಲು ಸತ್ಪುತ್ರನಂ ಪಡೆದು ಮೆರೆವೆ ಮುಂದೆ.

೯೨

ಗುರುವಿನಾದೇಶವನು ದೇಶಕಾಲಜ್ಞನಾದವನಿಪನು ತಲೆಯೊಳಾಂತು
ಅಂತಾಗಲೆಂದೊಪ್ಪುತರಸಿವೆರೆದೆರಗಿದನು ಪರಿತುಷ್ಟ ಶಿಷ್ಯನೃಪನು.

೯೩

ಆಬಳಿಕ ರಾತ್ರಿಯೊಳು ದೋಷಜ್ಞನಬ್ಜಜನ ವರಸುತನು ಸತ್ಯವಚನು
ಸುಖನಿದ್ರೆಗನುಮತಿಯನೂರ್ಜಿತ ಶ್ರೀಯುತನಿಗಾ ವಿಶಾಂಪತಿಗಿತ್ತನು.

೯೪

ವರತಪಃಸಿದ್ಧಿಯಿಹುದಾದೊಡಂ ವ್ರತನಿಯಮವಿಹುದೊಳ್ಳಿತೆಂದು ಬಗೆದವನು
ವನ್ಯದರ್ಭಾದಿಗಳನವನಿಪನಿಗೆಲ್ಲವನು ಕಲ್ಪಿಸಿದನಾ ಕಲ್ಪವಿದನು.

೯೫

ಕುಲಪತಿ ತೋರಿಸಿದೆಲೆವನೆಯೊಳು ಆ ನರಪ ದಿಲೀಪನು ಪುಗುತಂದು
ಪತ್ನಿ ಸುದಕ್ಷಿಣೆಯೊಡನೆ ಕುಶಾಂಕುರತಲ್ಪದೊಳಿರುಳನು ತಾಂ ಕಳೆದು
ಶಿಷ್ಯರ ವೇದಾಧ್ಯಯನದ ಘೋಷದೆ ನಿಶಿ ಕೊನೆಗೊಂಡುದ ಸಲೆ ತಿಳಿದು
ಮುದದಿಂ ಸತಿವೆರಸೊಡನೆಳ್ಚತ್ತನು ನೇಸರ್ಗಿನುದಯದೊಳಂತಂದು.

---

## ಎರಡನೆಯ ಸರ್ಗ

# ನಂದನೀವರಪ್ರಸಾದ

೧

ಪೊಳ್ತರೆಯೊಳಾ ಬಳಿಕ ಗಂಧಮಾಲೆಯ ತಂದು
ಜಾಯೆ ಗೋಪೂಜೆಯಸು ಮಾಡಿದಂದು
ಮೊಲೆಯುಂಡ ಕರುಕಟ್ಟಿ ಆದನಡವಿಗಟ್ಟಿದನು
ಜನಪನು ಯಶೋಘನನು ಮೇಯಲೆಂದು.

೨

ಧೇನುಖುರವಿನ್ಯಸ್ತ ಪೂತಪಾಂಸುಲಪಥದೊ
ಳಾ ಮನುಷ್ಯೇಶ್ವರನ ಧರ್ಮಪತ್ನಿ
ಬೆಂಬಳಿಯೊಳೈದಿದಳು ಸ್ಮೃತಿ ಶ್ರುತಿಯನನುಸರಿಸು
ವಂದದೊಳಪಾಂಸುಲರೊಳಗ್ರಗಣ್ಯೆ.

೩

ನಾಲ್ಗಡಲ ಪೆರ್ಮೊಲೆಯ ಗೋರೂಪಧಾರಿಣಿಯು
ಪೊರೆವಂತೆ ನೃಪವರನು ಸುರಭಿಸುತೆಯ
ಪೊರೆಯಲುಜ್ಜುಗಿಸಿದನು ನಿಲವೇಳ್ದು ದಯಿತೆಯನು
ಕೀರ್ತಿಪರಿಮಳಯುತನು ಕರುಣಿ ತಾನು.

೪

ನೋಂಪಿಗೆಂದಾಕಳನು ಅನುಸರಿಸುತಿರುವವನು
ಅನುಯಾಯಿವರ್ಗಮುಮನಿರವೇಳ್ದನು
ಏಕೆ ವೈಗಾವಲಿಗೆ ಹೆರರಂಗರಕ್ಷಕರು
ನಿಜವೀರ್ಯರಕ್ಷಿತರು ಮನುಪುತ್ರರು.

೫

ಇನಿಯತೆನೆವುಲ್ಗಳನು ಬಾಯಿಗೂಡಿಸಿ ನಲಿದು
ನೊಣಗಳನು ಹೊಡೆದು ಮೈನವೆಯ ಕೆರೆದು
ಮನಬಂದಪ್ರೋಲಾವು ಅಲೆಯುವುದಕನುಮತಿಸು
ತದರೊಂದು ಸೇವೆಯೊಳು ಸಂದನರಸು.

೬

ನಿಲ್ಲುವೊಡೆ ನಿಲ್ಲುತ್ತೆ ಚಲಿಸುವೊಡೆ ಚಲಿಸುತ್ತೆ
ಮಲಗಿದೊಡೆ ಧೇನು ತಾಂ ಕುಳ್ಳಿರುತ್ತೆ
ಮತ್ತೆ ನೀರೀಂಟಿದರೆ ತಾನುಮುದವೀಂಟುತ್ತೆ
ನೃಪನದನು ಸಾರಿದನು ನೆಳಲಿನಂತೆ.

೭

ತೇಜೋವಿಶೇಷಾನುಮಿತ ರಾಜಲಕ್ಷ್ಮಿಯನು
ತಳೆದವನು ಚಿಹ್ನೆಗಳನುಳಿದರೇನು
ಅಂತರ್ಮದಾವಸ್ಥೆಯನು ತಳೆದ ಗಜ ತಾನು
ಮದಜಲವ ಹೊರಸೂಸದಿದ್ದರೇನು ?

೮

ಮುನಿಹೋಮ ಧೇನುವನು ರಕ್ಷಿಪ ನಿಮಿತ್ತದೊಳು
ದುಷ್ಟ ಸತ್ವಂಗಳನು ಪಳಗಿಪವೊಲು
ವನದೆ ಸಂಚರಿಸಿದನು ಹೆದೆಯೆಳೆದ ಬಿಲ್ವಿಡಿದು
ಬಳ್ಳಿದಾಂಗುಡಿಗಳಲಿ ಮುಡಿಯ ಬಿಗಿದು.

೯

ಪಾರ್ಶ್ವಾನುಯಾಯಿಗಳ ಕಳುಹಿ ಬರುತಿರುವಂದು
ಪಾಶಭೃತ ಸಮನೃಪನ ನೋಡಿ ನಲಿದು
ಪಾರ್ಶ್ವದ್ರುಮಂಗಳಂದಾಲೋಕ ಶಬ್ದವನು
ಹಾಡಿದವು ಹಕ್ಕಿಗಳ ಕಲರವದೊಳು.

೧೦

ಪರಮಸಂಪೂಜ್ಯನನು ವಾಯುಸಖತೇಜನನು
ಮರುತಚೋದಿತ ಬಾಲಲತೆಗಳಂದು
ನೆನೆದರಳ ಸುರಿಸಿದವು ಆಚಾರಲಾಜವನು
ಸುರಿವಂತೆ ಚಾರುಪುರಕನ್ನಿಕೆಯರು.

೧೧

ಚಾಪವನು ಧರಿಸಿರುವನಾದರೂ ಕರುಣಾಳು
ವೆಂದದರ ಭಯ ತೊರೆದ ಬಗೆವೊಗಳಲು
ಆ ಚಾರುದೇಹವನು ನಿಟ್ಟಿಸಿದ ಘಳಿಗೆಯೊಳೆ
ಹರವುಗಣ್ಣಿನ ಫಲವ ಪಡೆದುದೆರಳೆ.

೧೨

ಮಾರುತನು ವೇಣುವಿವರಂಗಳಲಿ ಸುಳಿಸುಳಿದು
ಕೊಳಲವೋಲಿಂಚರವ ಸೂಸುವಂದು
ವನದೇವಿಯರು ನಲಿದು ನಿಜವಂಶಕೀರ್ತಿಯನು
ದನಿಯೆತ್ತಿ ಹಾಡಿದುದನಾಲಿಸಿದನು.

೧೩

ಆಧೂತತರುಸುಮೋತ್ಕರಗಂಧ ಪರಿಮಳನು
ನಿರ್ಝರತುಷಾರಯುತ ಪವಮಾನನು
ಶೂನ್ಯಾತಪತ್ರನನು ಆತಪಕ್ಲಾಂತನನು
ಆಚಾರಪೂತನನು ಸೇವಿಸಿದನು.

೧೪

ರಕ್ಷಕ ದಿಲೀಪನ್ನೃಪನೈದಿದೆಡೆಯೆಡೆಗಳಲಿ
ಮಳೆ ಹೊಯ್ಯದಾರಿದುದು ಕಾಡುಕಿಚ್ಚು
ವೈರ ಕಾಣಿಸದಾದುದಧಿಕಸತ್ತ್ವಂಗಳಲಿ
ತೋರಿದವು ಹೂ ಹಣ್ಣು ಹೆಚ್ಚು ಹೆಚ್ಚು.

೧೫

ದಿವಸಾವಸಾನದೊಳು ಚೆಂಗುಡಿಯ ಚಿಗುರವೊಲು
ಹೊಳೆವಿನನ ಕಾಂತಿ ಮೇಣ್ ಮುನಿಯ ಧೇನು
ದಿಗ್‌ದಿಗಂತವ ಚರಿಸಿ ಚರಿಸಿದೆಡೆ ಶುಚಿಗೈದು
ಮರಳಲುಜ್ಜುಗಿಸಿದವು ಮನೆಯ ನೆನೆದು.

೧೬

ದೇವ ಪಿತ್ರಾತಿಥಿಕ್ರಿಯೆಗಳಲಿ ಸಲುವಳನು
ಮಧ್ಯಲೋಕೇಶ್ವರನು ಬಳಿವಿಡಿದನು
ಸಜ್ಜನಸ್ತುತನಿಂದಲಾಕೆಯುಂ ಬೆಳಗಿದಳು
ಪ್ರತ್ಯಕ್ಷ ವಿಧಿಯುಕ್ತ ಶ್ರದ್ಧೆಯಂತೆ.

೧೭

ಪಲ್ವಲದಿನೆದ್ದು ಬರುವೆಕ್ಕಲದ ಹಿಂಡಿನೊಳು
ಕೃಷ್ಣಮೃಗತತಿಯಿರುವ ಶಾದ್ವಲದೊಳು
ಮರಗಳಿಕ್ಕೆಯ ಸಾರುತಿರುವ ನವಿಲೋಳಿಯೊಳು
ಕಾಡು ಕಪ್ಪಾದುದನು ನೋಡಿದನು ನೃಪನು.

೧೮

ಆ ಪೀನಭಾರದುದ್ವಹನ ಪ್ರಯತ್ನದೊಳು
ಮೇಣ್ ತನ್ನದೊಂದು ತನುಗೌರವದೊಳು
ನಂದಿನಿ ನರೇಂದ್ರರ್ಕಳಿರ್ವರೂ ದಾರಿಗರು
ಆಶ್ರಮದ ಮಾರ್ಗವನು ಬೆಳಗಿರ್ದರು.

೧೯

ವಾಸಿಷ್ಠಧೇನುವನು ಅಡವಿಯಿಂದನುಸರಿಸು
ತೈತರುವ ಸಮಯದೊಳು ತನ್ನ ಅರಸು
ಆ ಸುದಕ್ಷಿಣೆಯೊಲಿದುಪೋಷಿತ ವಿಲೋಚನದೆ
ಕುಡಿವವೋಲೀಕ್ಷಿಸಿದಳೆವೆ ಮಿಡುಕದೆ.

೨೦

ಆಕಳನು ಮುಂದಿರಿಸುತಾ ನೃಪನು ಹಿಂದಿರಲು
ನೃಪಧರ್ಮಪತ್ನಿ ಬಂದೆದುರುಗೊಳಲು
ಅವರಿರ್ವರಂತರದೊಳಾಧೇನು ಬೆಳಗಿಹುದು
ಹಗಲು ಇರುಳುಗಳೆಡೆಯ ಸಂಜೆವೋಲು.

೨೧

ಅಕ್ಷತೆಯ ಪಾತ್ರೆವಿಡಿದಾ ಸುವಕ್ಷಿಣೆ ಬಂದು
ಗೋಪ್ರದಕ್ಷಿಣೆಗೈದು ಮಣಿದು ನಿಂದು
ಅರ್ಚಿಸಿದಳರ್ಥಸಿದ್ಧಿದ್ವಾರದಂತಿರುವ
ಸುವಿಶಾಲಶೃಂಗಾಂತರವನು ತುರುವ.

೨೨

ನಲಿದರಾಯಿರ್ವರುಂ ಧೇನು ವತ್ಸೋತ್ಸುಕಳು
ಅರಸಿಯ ಸಪರ್ಯೆಯನು ಕೊಂಡಳೆಂದು
ತದ್ವಿಧರನುಗ್ರಹದ ಚಿಹ್ನಗಳು ಭಕ್ತೋಪ
ಪನ್ನರೊಳು ಸದ್ಯಃಫಲಂಗಳಲ್ತೆ !

೨೩

ಪತ್ನಿಯೊಡನಿರುವ ಗುರುಚರಣಗಳನೊತ್ತಿದನು
ಮುಗಿಸಿದನು ಸಂಧ್ಯಾದಿ ಕರ್ಮಗಳನು
ದೋಹಾವಸಾನದೊಳು ಸೇವಿಸಿದನಾಕಳನು
ಅರಿಗಳನು ತೋಳ್ಬಲದೊಳಳಿಸಿದವನು.

೨೪

ಹೂಹಣ್ಣು ದೀಪಧೂಪಾದಿಗಳ ಸನಿಹದೊಳು
ಹಸು ಕುಳಿತ ಬಳಿಕರಸು ಕುಳಿತು ತಾನು
ಹಸು ನಿದ್ರೆಗೈದಂದು ತಾನು ನಿದ್ದೆಗೆ ಸಂದು
ಪಾಲಕನು ತುರುವೆದ್ದ ಬಳಿಕೆದ್ದನು.

೨೫

ಸತಿಯೊಡನೆ ಪುತ್ರಾರ್ಥಮೀ ತೆರದ ನೋಂಪಿಯೊಳು
ಮೂರು ಸೂಳೇಳುದಿನ ಸಂದಿರ್ದುದು
ದೀನಜನರುದ್ಧಾರ ಕಾರ್ಯದೊಳು ತೊಟ್ಟವನು
ಮಹನೀಯಕೀರ್ತಿಯುತನಾ ಮಹಿಮನು.

೨೬

ಮರುದಿನದೊಳಾತ್ಮಾನುಚರನೊಂದು ಭಾವವನು
ತಿಳಿವೆನೆಂದಾ ಮುನಿಯ ಹೋಮಧೇನು
ಹೊಕ್ಕುದಮರಾಪಗೆಯ ಜಲದೊಳಗೆ ಬೆಳೆದಗೆಯ
ಉಮೆಯ ತಂದೆಯ ಮನೆಯ ಹುಲ್ಲುಗವಿಯ

೨೭

ಹಿಂಸ್ರಗಳು ಮನದೊಳುಂ ಕೊಲಲಾರವಿದನೆಂದು
ಗಿರಿವನದ ಶೋಭೆಯೊಳು ಮುಳುಗಿದಂದು
ನೃಪನ ಕಣ್ಣರಿಯದೊಲು ನೆಗೆದು ಕತ್ತನು ಮುರಿದು
ಕೊಂಡೊಯ್ದುದಾ ತುರುವ ಸಿಂಹವೊಂದು.

೨೮

ಗವಿಯ ಮಾರ್ದನಿಯಿಂದೆ ಆಕಳಿನ ರೋದನವು
ಸಲೆ ಬೆಳೆದು ನೀಳಮೆನೆ ರಶ್ಮಿವೋಲು
ಆರ್ತಜನಸಾಧುವಾದಾ ನೃಪನ ದಿಟ್ಟಿಯನು
ಎಳೆದುದಂದದ್ರಿಯೊಳೆ ನಾಟಿದದನು.

೨೯

ಧಾತುರಾಗಗಳಿಡಿದ ಗಿರಿಯ ಶಿಖರದ ಮೇಲೆ
ಬೆಳೆದು ಹೂ ಬಿಟ್ಟಿರುವ ಲೋಧ್ರದೋಲೆ
ಕೆಂಪು ಹಸುವಿನ ಮೇಲೆ ನಿಂತಿರುವ ಸಿಂಹವನು
ಕಂಡನು ಧನುರ್ಧರದಿಲೀಪನೃಪನು.

೩೦

ಸಿಂಹದೊಲು ನಡೆವವನು ಶರಣರನು ಪೊರೆವವನು
ಹಗೆಗಳನು ಕೊಂದವನು ರೋಷಮೊಗೆಯೆ
ಬಳಿಕವನು ಕೊಲಲೆಂದು ಕೊಲತಕ್ಕ ಸಿಂಹವನು
ದೊಣೆಯಿಂದಲೆಳಸಿದನು ಕಣೆಯನೆಳೆಯೆ.

೩೧

ಅಂಗುಲಿಯ ಬೆಳಗಿನೊಳು ಹಿಳುಕುಗಳು ಹೊಳೆದೆಸೆಯೆ
ಶರಪುಂಖದೊಳು ಸಿಲುಕಿದುಗುರು ಮೆರೆಯೆ
ಕೊಲಲೆಂದು ಬತ್ತಳಿಕೆಗಿಟ್ಟ ಬಲಗೈಯಂದು
ಚಿತ್ರದೊಳು ಬರೆದಂತೆ ತಾನಿರ್ದುದು.

೩೨

ಮಂತ್ರಮಾಟಂಗಳಿಂದಳವಿಗೆಟ್ಟಹಿಯವೊಲು
ಭುಜವಲುಗದಂದೊಗೆದ ಕಿನಿಸು ಮಿಗಲು
ಸನಿಹದಪರಾಧಿಯನು ಸೋಂಕದೊಲು ಭೂಮಿಪನು
ಒಳಗೊಳಗೆ ನಿಜತೇಜದಿಂದುರಿದನು.

೩೩

ಆರ್ಯಜನಗೃಹ್ಯನನು ಮನುವಂಶಕೇತುವನು
ಸಿಂಹೋರುಸತ್ತ್ವನನು ವಿಸ್ಮಿತನನು
ಮತ್ತುಮಚ್ಚರಿಗೊಳಿಸುತಿಳೆಯ ನರರಾಡುವೊಲು
ನುಡಿಸಿದುದು ಹಸುಹಿಡಿದ ಸಿಂಹ ತಾನು.

೩೪

ಬೇಡ ಬೇಡೀಶ್ರಮಂ ಸಾಕೆಲೆ ಮಹೀಪಾಲ
ಕಣೆಯನಿರದೆಚ್ಚೊಡಂ ವ್ಯರ್ಥ ಕೇಳ
ವೃಕ್ಷಮೂಲೋತ್ಪಾಟನಾಸಕ್ತಮಾರುತನು
ಅದ್ರಿಭೇದನಕೆಂತು ಶಕ್ತನಹನು

೩೫

ನಾನೆ ಕುಂಭೋದರನು ಆ ನಿಕುಂಭನ ಸಖನು
ಕೈಲಾಸದಂತಿರುವ ಬಿಳಿಯ ಮೈಯ
ನಂದಿಯನು ಹರನೇರುವಂದಡಿಯ ಸೋಂಕಿನೊಳು
ಶುಚಿಗೊಂಡ ತೊತ್ತೆಂದು ತಿಳಿಯೆನ್ನನು.

೩೬

ಸ್ಕಂದಜನನಿಯ ಮೊಲೆಯಿನುಗುವ ಆ ಪಯವೆಂತು
ಹೊಂಗೊಡದಿನಾಕೆಯೆರೆದುದವನಂತು
ಸವಿಸವಿದು ಬೆಳೆದಿರುವ ಈ ದೇವದಾರುವನು
ಮಗನವೊಲು ಕಾಂಬನು ವೃಷಧ್ವಜನು.

೩೭

ಒಂದುದಿನ ಕಾಡಾನೆ ಕೆನ್ನೆ ತುರಿಕೆಯ ಕಳಿಯೆ
ಕಟೆಯುಜ್ಜಿದಂದಿದರ ಸಿಪ್ಪೆ ಸುಲಿಯೆ
ಅಸುರಾಸ್ತ್ರಘಾಯದೊಳು ತನ್ನಾ ಕುಮಾರನೆಯೆ
ನೊಂದವೊಲು ಮರುಗಿದಳು ಅದ್ರಿತನಯೆ.

೩೮

ವನಗಜತ್ರಾಸಾರ್ಥಮೀ ಅದ್ರಿಕುಕ್ಷಿಯೊಳು
ಶೂಲಧರನಂದಿನಿಂದೀ ತೆರದೊಳು
ಬಳಿಬರುವ ಮೃಗಗಳನು ಕೊಲುವ ಸಿಂಹತ್ವವನು
ನನ್ನೊಳಿಟ್ಟೀ ಕೆಲಸ ಕೊಟ್ಟಿರುವನು.

೩೯

ಕಾಲಸಂದುದು ಎಂದು ಪರಶಿವನೆ ಸಾರಿರುವ
ತಾನಾಗಿ ಬಂದಿಂತು ಬಳಿಯೊಳಿರುವ
ಇದರ ನೆತ್ತರಿನೂಟದಿಂದಾನು ತಣಿಯುವೆನು
ರಾಹು ಶಶಿಕಿರಣದಿಂ ತಣಿಯುವಂತೆ.

೪೦

ಬೆಳಗಿರುವೆ ಗುರುವಿನೊಳು ನೀಂ ಶಿಷ್ಯಭಕ್ತಿಯನು
ಲಜ್ಜೆಯನು ತೊರೆದಿನ್ನು ತೆರಳು ನೀನು
ಕಾಪಿಡುವುದರಿದಪ್ಪುದಸ್ತ್ರದಿಂದಾವುದನು
ಜಸಗುಂದನದರಿಂದಲಸ್ತ್ರಧರನು.

೪೧

ಪುರುಷಾಧಿರಾಜನು ಮೃಗಾಧಿರಾಜನು ಪೇಳ್ದ
ಪ್ರೌಢವಚನಂಗಳನು ಕೇಳ್ದು ತಾನು
ತೊರೆದನಪಮಾನವನು ಗಿರಿಶಪ್ರಭಾವದೊಳು
ಪ್ರತ್ಯಾಹತಾಸ್ತ್ರನಾಗಿರುವೆನೆಂದು.

೪೨

ವಜ್ರಮೋಚನಭರದೊಳಸಮಾಕ್ಷನೀಕ್ಷಣದೆ
ನಿಶ್ಚಲಿತನಾದಿಂದ್ರನೊಂದು ತೆರದೆ
ಬಾಣಪ್ರಯೋಗದೊಳು ತತ್ಪೂರ್ವಭಂಗಿತನು
ವಿತಥಪ್ರಯತ್ನನೃಪನಿಂತೊರೆದನು.

೪೩

ಸಂರುದ್ಧಚೇಷ್ಟನಿರಲಿಂದೇನನಾಡಿದರು
ನನ್ನ ಮಾತಪಹಾಸ್ಯಕೆಡೆಯೆನಿಪುದು
ಬಲ್ಲೆ ನೀಂ ಪ್ರಾಣಿಗಳ ಹೃದ್ಗತಿಯನೆಲ್ಲವನು
ಆದುದರಿನೊರೆಯುವೆನು ಹೇ ಮೃಗೇಂದ್ರ !

೪೪

ಆತನು ಚರಾಚರಂಗಳ ಜನಿಸ್ಥಿತಿಮೃತಿಯ
ಕಾರಣಮಹೇಶ್ವರನು ಸನ್ಮಾನ್ಯನು
ಅನುಪೇಕ್ಷಣೀಯಮಲ್ತೆನ್ನೆದುರೊಳಳಿಯುತಿರು
ವಾಹಿತಾಗ್ನಿಯ ಗುರುವಿನೀ ಧನವಿದುಂ.

೪೫

ಕತ್ತಲಾಗುತ ಬರಲು ಆತುರದೊಳೆಣ್ಣುತಿರು
ವೆಳಗರುವಿನೀ ತಾಯ್, ಮುನಿಯ ತುರುವ
ಮೃಗರಾಜ ! ಬಿಟ್ಟುಬಿಡುವೊಂದನುಗ್ರಹ ತೋರು
ನನ್ನೊಡಲಿನಿಂದ ಹೊರೆ ನಿನ್ನ ತನುವ.

೪೬

ಆ ಬಳಿಕ ದಾಡೆಗಳ ಕಿರಣತತಿ ಗಿರಿಗುಹೆಯ
ಕತ್ತಲೆಯ ಕಳೆಯುತಿರೆ ಭೂತಪತಿಯ
ಕಿಂಕರನು ನಸುನಗುತ್ತಾಡಿದನು ಮರುನುಡಿಯ
ಮರಳಿ ತಾ ನುಡಿಸಿರ್ದನರ್ಥಪತಿಯ.

೪೭

ಹೊಸಹರೆಯವಿಹುದು ಮೇಣೊಕ್ಕೊಡೆಯ ತಿರೆಯೊಡೆಯ
ತನವಿಹುದು ದೇಹಸೌಂದರ್ಯವಿಹುದು
ಅತ್ಯಲ್ಪಫಲಕೆಂದು ಅತ್ಯಧಿಕದವುಗಳನು
ಬಿಡುವ ನೀನವಿಚಾರಿಯೆಂದೆಣಿಪೆನು.

೪೮

ಭೂತಾನುಕಂಪೆಯೊಳು ಜನನಾಥ ನೀನಳಿಯೆ
ನಿನ್ನಳಿವಿನಿಂದುಳಿವುದೊಂದು ತುರುವು
ನೀನುಳಿದೆಯಾದೊಡಿಂಪೆಡರಡಸದಂದದೊಳು
ಪ್ರಜೆಗಳನು ತಂದೆವೊಲು ಪೊರೆಯಲಹುದು.

೪೯

ಹಸುವೊಂದರಪರಾಧದಿಂದುರಿಯುವಗ್ನಿವೊಲು
ಮುನಿದೇಳ್ವ ಗುರುವರನಿಗಂಜುತಿಹೆಯ
ಒಡನೆ ಕೊಡವಾಲ್ಗರೆವ ಕೋಟಿಗೋಗಳನಿತ್ತು
ಮುನಿಯ ಮುನಿಸಿಳಿಯಿಸುವ ಶಕ್ತ ನೀನು.

೫೦

ರಕ್ಷಿಪುದು ಮಂಗಳಪರಂಪರೆಯ ಭೋಗಿಸುವ
ತೇಜಸ್ವಿಯಾದೊಡಲನಿಂದು ನೀನು
ಶುದ್ಧಯುತ ರಾಜ್ಯವದು ಇಳೆಗಂಟಿಕೊಂಡಿರುವು
ದೊಂದರೊಳು ದಿವಿಯಿಂದೆ ಭಿನ್ನ ತಾನು.

೫೧

ಇನಿತೊರೆದು ವಿರಮಿಸಿರಲಾ ಮೃಗೇಂದ್ರಾಧಿಪನು
ತದ್ಗುಹೆಯ ಮಾರ್ದನಿಯೊಳದ್ರಿಪತಿಯುಂ
ಕ್ಷಿತಿಪಾಲನಂ ಕುರಿತು ಪ್ರೀತಿಯಿಂದುಚ್ಚತರ
ಕಂಠದಿಂದದನೆ ಪೇಳ್ದಂತಿರ್ದುದು.

೫೨

ಆಲಿಸುತೆ ದೇವಾನುಚರನೊರೆದ ನುಡಿಗಳನು
ಮರಳಿಯುಂ ನರದೇವನಿಂತೆಂದನು
ಬೆದರುಗಣ್ಣಿನೊಳಾವು ಮೃಗಹಿಡಿದ ಭೀತಿಯೊಳು
ತನ್ನನೇ ನೋಡುತಿರೆ ಆ ದಯಾಳು.

೫೩

ಕ್ಷತದಿಂದಲಾರ್ತರನು ಪೊರೆವೊಂದು ಕತದಿಂದೆ
ಕ್ಷತ್ರಪದ ಭುವನದೊಳು ಸಂದಿರ್ದುದು
ತದ್ವೈಪರೀತ್ಯದೊಳು ಅರಸುತನವೆನಗೇಕೆ
ದುಗುಡದೊಳು ಮಲಿನಗೊಂಡಸುವಿದೇಕೆ ?

೫೪

ಪೆರಪೆರತು ತುರುಗಳನು ಕೊಡುವುದರಿನಾ ಮುನಿಯ
ಕೋಪವನು ನಾಂ ತವಿಸಲೆಂತಪ್ಪುದು
ಸುರಭಿಯಿಂ ನ್ಯೂನಮಲ್ಲೆಂದು ತಿಳಿ ನಂದಿನಿಯ
ರುದ್ರೋಜೆಯಿಂದಿದನು ಹಿಡಿದೆಯಿಂದು.

೫೫

ಆದುದರಿನಿತ್ತೆನ್ನ ದೇಹವನು ನಿನ್ನಿಂದ
ಲೀ ತುರುವನುಳಿಸುವುದು ಯುಕ್ತವಹುದು
ನಿನ್ನ ಪಾರಣೆ ನಿಲ್ಲದೆಂದಿನವೊಲಾಗುವುದು
ಹೋಮವಿಧಿಗೀ ಧೇನು ಮುನಿಗುಳಿವುದು.

೫೬

ಅತಿಜತನದಿಂದಿಂತು ದೇವದಾರುವ ಪೊರೆವ
ಪರತಂತ್ರನಾದನೀನರಿಯೆಯೇನು
ರಕ್ಷ್ಯವನು ಕಳೆದುಕೊಂಡೊಡೆಯನ ಸಮಕ್ಷದೊಳು
ಅಕ್ಷತನು ನಿಲಲಾರೆನೆನುವುದಿದನು.

೫೭

ತಿಳಿಯುವೊಡೆ ನನ್ನನು ವಧಾರ್ಹನಿವನಲ್ಲೆಂದು
ಮಮಯಶಃಕಾಯದೊಳು ದಯವ ತೋರು
ದೇಹ ನಶ್ವರವೆಂದು ತಿಳಿದವರು ಲೆಕ್ಕಿಸರು
ಮೃಣ್ಮಯದ ದೇಹವನು ನನ್ನನ್ನರು.

೫೮

ಮಾತುಕಥೆಯಿಂದೆ ಕೆಳೆ ಬೆಳೆವುದೆಂದೆನ್ನುವರು
ಕಾಡಿನೊಳು ಕೂಡಿದೆವು ಕೆಳೆ ಬೆಳೆದುದು
ನಿನ್ನ ಬಂಧುವಿನೊಂದು ಬೇಡಿಕೆಯ ಕೆಡಿಸದಿರು
ಭೂತನಾಥಾನುಚರ ಬೇಳ್ಪೆನಿಂದು.

೫೯

ಒಳ್ಳಿತಹುದಂತಾಗಲೆಂದು ಹರಿ ನುಡಿದಂದು
ಮುಕ್ತಭುಜಬಂಧನು ದಿಲೀಪನೃಪನು
ಶರವನೊರ್ಕಡೆಯೆಸೆದು ಮಾಂಸದೊರ್ಪಿಂಡದೊಲು
ನಿಜತನುವ ಹರಿಗಿತ್ತನೊಲಿದು ತಾನು.

೬೦

ಭರದಿಂದಲಿರವೆ ಬಂದೆರಗುವುದು ಹರಿಯೆಂದು
ಮೊಗಬಾಗಿದವನಿಪನು ಎಣಿಸಿದಂದು
ಪುಷ್ಪವೃಷ್ಟಿಯ ಕರೆದರೊಡನೆ ವಿದ್ಯಾಧರರು
ಆನಂದಸಂಭ್ರಮೋತ್ಸಾಹಯುತರು.

೬೧

ಅಮೃತಾಯಮಾನಮಪ್ಪಿನಿನುಡಿಯ ಮಾತಿನೊಳು
ಮಗನೆ ಏಳೇಳೆಂದು ಹೇಳುತಿರಲು
ಸಿಂಹಕ್ಕೆ ಪ್ರತಿಯಾಗಿ ಎದ್ದು ಕಂಡನು ನೃಪನು
ತಾಯವೊಲು ಪಾಲ್ಗರೆವ ನಂದಿನಿಯನು.

೬೨

ನಾನೆ ಮಾಯೆಯ ರಚಿಸಿ ನಿನ್ನನು ಪರೀಕ್ಷಿಸಿದೆ
ಎಲೆ ಸಾಧು ಎಂದು ಆ ವಿಸ್ಮಿತನನು
ನಂದಿನಿಯು ನುಡಿಸಿದಳು ಮುನಿಮಹಿಮೆಯಿಂದಾನು
ಯಮನಿಗಾದರು ಅಂಜೆನುಳಿದವರಿನೇನು !

೬೩

ಗುರುವಿನೊಳು ಭಕ್ತಿಯನು ನನ್ನೊಳನುಕಂಪೆಯನು
ಮೆರೆದಿರುವ ನಿನಗೆ ನಾನೊಲಿದಿರುವೆನು
ಬಗೆಯದಿರು ಬರಿಯ ಹಾಲನು ಕರೆವ ಹಸುವೆಂದು
ವರವನೆರೆ ಕಾಮದುಘೆಯೆಂದು ತಿಳಿದು.

೬೪

ನಿಜಕರಾರ್ಜಿತವೀರಶಬ್ದಸಂಶೋಭಿತನು
ಕರಮುಗಿದು ಬೇಡಿದನು ಮಾನಿತಾರ್ಥೀ
ವಂಶಕರ್ತನು ಸುತನು ಕೀರ್ತಿ ಸಂಶೋಭಿತನು
ತನಗಾ ಸುದಕ್ಷಿಣೆಯೊಳಾಗಲೆಂದು.

೬೫

ಸಂತಾನಕಾಮನಾದರಸನೊಂದರಿಕೆಯನು
ಸಲಿಪೆನೆಂದಂತಾಗಲೆಂದು ಗೋವು
ಎಲೆಯ ದೊನ್ನೆಯಗೈದು ನನ್ನ ಹಾಲನು ಕರೆದು
ಎಲೆ ಮಗನೆ ನೀನಿಂದು ಕುಡಿಯೆಂದಿತು.

೭೬

ಕರು ಹಾಲು ಕುಡಿದಂದು ಹೋಮವಿಧಿ ಮುಗಿದಂದು
ಬಳಿಕ ಋಷಿಯೊಪ್ಪಿಗೆಯನೊಲಿದು ಪಡೆದು
ಉಳಿದ ಪಾಲನು ಕುಡಿಯಲಾಶಿಸುವೆನೆಲೆ ಮಾತೆ
ಪೊರೆವ ತಿರೆಯಾರನೆಯ ಪಾಲಿನಂತೆ.

೭೭

ಮುನಿಯ ತುರು ಕಟ್ಟಿರಕಗೊಂಡುದಂದಾತನೊಳು
ಬಿನ್ನವಿಸಲಿಳಿಯೆರೆಯನೀ ತೆರದೊಳು
ಆಶ್ರಮದೊಳಾಶ್ರಮಕೆ ಹಿಮಗಿರಿಯ ಗವಿಯಿಂದೆ
ಮರಳಿದುದು ಅನುಸರಿಸುತರಸು ಬರೆ ಹಿಂದೆ.

೭೮

ಹರ್ಷಚಿಹ್ನಾನುಮಿತಧೇನುಪ್ರಸಾದವನು
ನೃಪರಗುರು ಸುಪ್ರಸನ್ನೇಂದುಮುಖನು
ಪುನರುಕ್ತಿಯಂತಿರಲು ಗುರುವಿಗಂದರುಹಿದನು
ನಿಜಸತಿಗುಮದನೊಲಿದು ವಿವರಿಸಿದನು.

೭೯

ಕರುವು ಕುಡಿದುಳಿದುದನು ಹವನಕೆರೆದುಳಿದುದನು
ಗುರುವಿನಪ್ಪಣೆಪಡೆದು ಕುಡಿದನಲ್ತೆ
ನಿರ್ದುಷ್ಟಗುಣಯುತನು ಸಾಧುಜನವತ್ಸಲನು
ಬೆಳ್ಜಸವನಂಗವಿಸಿ ಕುಡಿಯುವಂತೆ.

೮೦

ಮರುದಿವಸದುದಯದೊಳು ವ್ರತಪಾರಣಾಂತದೊಳು
ಪ್ರಸ್ಥಾನದಾಶಿಷಂಗಳನು ನುಡಿದು
ರಾಜದಂಪತಿಗಳನು ವಶಿವಸಿಷ್ಠನು ತಾನು
ರಾಜಧಾನಿಗೆ ನಲಿದು ಬೀಳ್ಕೊಟ್ಟನು.

೭೧

ಹುತಹೋಮವಹ್ನಿಯನು ಮುನಿವರವಸಿಷ್ಠನನು
ಆಬಳಿಕ ಮುನಿಸತಿಯರುಂಧತಿಯನು
ಬಲವಂದು ಬಳಿಕ ಕರುವೊಡನಿರುವ ಧೇನುವನು
ಮಂಗಳೋದ್ಯತ್ಪ್ರಭನು ಹೊರವಂಟನು.

೭೨

ಕಿವಿಗೆ ಸವಿಯನು ಸುರಿವ ಜೇನಿಂಚರಂಗೈವ
ಅತ್ತಿತ್ತಲಲುಗದೊಲು ಮುಂಬರಿಯುವ
ಚೆಲುವು ತೇರೊಳು ಕುಳಿತು ತೆರಳಿದನು ಸತಿವೆರಸು
ಫಲಿಸಿದ ಮನೋರಥವನೇರಿದನೊಲು.

೭೩

ಬರದೆ ಕಾಂಬಾಸೆಯನು ಜನದೊಳೊಗೆಸಿರ್ದನನು
ವ್ರತದೆ ಸೊರಗಿರ್ದನನು ನರಪತಿಯನು
ಅದೆಹುಟ್ಟಿದಿಂದುವನು ನೋಳ್ಪಂತೆ ಪುರಜನರು
ತಣಿಯದೊಲು ಸಡಗರದಿನೀಕ್ಷಿಸಿದರು.

೭೪

ಪುರಜನರು ಪೊಗಳುತಿರಲಮರೇಂದ್ರವೈಭವನು
ಕೇತುತತಿ ಮೆರೆವ ಪುರಕೈತಂದನು
ಶೇಷಸಮಭುಜಬಲನು ಮರಳಿ ಭೂಭಾರವನು
ನಿಜಭುಜದೊಳಾಂತನು ದಿಲೀಪನೃಪನು.

೭೫

ಅತ್ರಿನೇತ್ರೋದ್ಭೂತ ತೇಜವನಂಬರವು ತಳೆದಂದದೆ
ಅಗ್ನಿಯಿರಿಸಿದ ಶೈವತೇಜವನಮರನದಿ ತಳೆದಂದದೆ
ಲೋಕಪಾಲಕರಂಶದಿಂದೆಸೆವಮಳಗರ್ಭವನರಸಿತಿ
ತಮ್ಮ ನರಪತಿವಂಶವರ್ಧನಕೆಂದು ತಳೆದಳು ಗುಣವತಿ.

## ಮೂರನೆಯ ಸರ್ಗ

# ರಘುರಾಜ್ಯಾಭಿಷೇಕ

೧

ಪತಿಯ ಕೋರಿಕೆಯೆನುವ ಏಳ್ಗೆಯಗೆಯೆನುವ
ಸಖಿಯರಾಲೋಕನಕೆ ಬೆಳುದಿಂಗಳೆನುವ
ಇಕ್ಷ್ವಾಕುಸಂತತಿನಿಧಾನವೆಂದೆನುವ
ಗರ್ಭಲಕ್ಷಣಗಳನು ತಳೆದಳಾ ಮಹಿಷಿ.

೨

ಸೊರಗಿ ಮೈ ಕಂದಿದವಳಲ್ಪ ಭೂಷಣಳು
ಲೋಧ್ರದರಳಿನವೋಲು ಬೆಳ್ಪುಮೊಗದವಳು
ಹಲಕೆಲವು ಚುಕ್ಕಿಗಳ ಪೊಗರೆಸೆವ ಪೆರೆಯ
ಪೊಳ್ತರೆಯ ಶರ್ವರಿಯ ಪೋಲ್ತಳಾ ಪರಿಯ.

೩

ಮಣ್ಣುಗಂಪುಗುವವಳ ಮೊಗವನವನಿಪನು
ಗುಟ್ಟಿನೊಳು ಮೂಸಿಯೂ ಪಡೆಯ ತೃಪ್ತಿಯನು
ಮುಗಿಲ ದಿನಗಳಲಿಳಿವ ಮಳೆಹನಿಗಳಿಂದೆ
ತೊಯ್ದಡವಿಹೊಂಡವನು ಸವಿವಾನೆ ತೆರದೆ.

೪

ಭುವಿಯನು ದಿಗಂತವಿಶ್ರಾಂತರಥಸುತನು
ದಿವಿಯನೆಂತಿಂದ್ರಸಂತನುಭವಿಸಲಿಹನು
ಎಂದಿತರ ರಸಗಳನು ಆ ದೇವಿ ತೊರೆದು
ಮನವಿಟ್ಟಳಾ ತೆರದಭೀಷ್ಟಗಳಲಂದು.

೫

ನಾಣಿನಿಂದಾಸೆಗಳನೆನಗರುಹದಿಹಳು
ಆವುದನು ಬಯಸಿಹಳೊ ಈಕೆ ಮಾಗಧಳು
ಇಂತಾ ದಿಲೀಪನೃಪ ನಿಮಿಷನಿಮಿಷದೊಳು
ಕೇಳುತಿಹನಾಳಿಯರ ತಾನಾದರದೊಳು.

೬

ಬಸುರಿನೊಳ್ಬಯಕೆಯುಬ್ಬೆಗವನವಳಾಂತು
ಬಯಸಿದುದನೊಡನೊಡನೆ ಪಡೆದಳು ಸಮಂತು
ಹೆದೆಯನೆಳೆದೇರಿಸಿದ ಬಿಲ್ಲಿರಲು ನೃಪನು
ನಾಕದಿಂದಾದರೂ ಬಯಸಿದುದ ತಹನು.

೭

ಬಳಿಕ ದಿನಕಳೆದಂತೆ ಬಯಕೆಗಳನುಳಿದು
ಹೊರವಾದ ಬೆಳೆದ ಅಂಗಾಂಗಗಳಿನಂದು
ಹಳೆಯೆಲೆಗಳುದುರಿ ಹೊಸ ಚಿಗುರುಗಳ ತಳೆದು
ಮೆರೆವೊಂದು ಬಳ್ಳಿವೊಲು ತೋರ್ದಳವಳೆಸೆದು.

೮

ದಿನದಿನಕೆ ಕಡುಬಟ್ಟಿತೆನಲುಬ್ಬಿ ಬೆಳೆದು
ಸುತ್ತ ತುದಿ ಕಡು ಕಪ್ಪು ಬಣ್ಣವನು ತಳೆದು
ಅಳಿ ಮುತ್ತಿದಬ್ಜಕೋಶದ್ವಯದ ಸಿರಿಯ
ಕುಚಯುಗ್ಮ ತಾನಿಳಿಕೆಗೈದುದರಸಿತಿಯ !

೯

ನಿಕ್ಷೇಪಗರ್ಭೆಯಹ ಕಡಲುಡೆಯ ತಿರೆಯ
ಪಾವಕನು ಮಧ್ಯೆ ತಾನಡಗಿರುವ ಶಮಿಯ
ಒಳಗೊಳಗೆ ಜಲ ಪರಿಯುವಾ ಸರಸ್ವತಿಯ
ಎಣೆಯೆಂದು ಎಣಿಸಿದನು ನೃಪನು ಗರ್ಭಿಣಿಯ.

೧೦

ಪ್ರೇಯಸಿಯ ಅನುರಾಗಕುಚಿತವೆಂದೆನುವ
ಭುಜಬಲಮೊಳಾರ್ಜಿಸಿದ ಸಂಪದಕೆ ತಗುವ
ಮಗನೊಗೆವ ಸಂತಸಕೆತಗುವ ಸರಿದೊರೆಯ
ಪುಂಸವನವೆಸಗಿದನು ದಾತೃತ್ವಕೆಣೆಯ.

೧೧

ಇಂದ್ರಾದ್ಯರಂಶಂಗಳೊಳವೊಕ್ಕ ಕತದೆ
ಬಸಿರ ಹೊರೆಯಿಂದೆಂತೊ ಮೆಲ್ಲನಿರದೆಳ್ದು
ಬೊಗಸೆಗೈಮುಗಿವಂದು ಕಡು ಬಳಲಿದವಳ
ಕುಡಿನೋಟಕೊಲಿದಪನು ಮನೆಗೆ ಬಂದರಸು.

೧೨

ಶಿಶುವೈದ್ಯಪರಿಣತರು ವರಭಿಷಕ್ ಜನರು
ಗರ್ಭಸಂರಕ್ಷಣೆಯೊಳವರಿರಲು ಹಿತರು
ಕಾಲದೊಳು ಪ್ರಸವೋನ್ಮುಖೀಪ್ರಿಯೆಯನರಸು
ನೋಡಿದನು ಮುಗಿಲಿರುವ ಬಾನನೆಂತಂತು.

೧೩

ಗ್ರಹಗಳೈದುದಯಿಸುತಲುಚ್ಚದೆಸೆಗಿರಲು
ಭಾಗ್ಯಸಂಪದಗಳನು ಸೂಚಿಸುತಲಿರಲು
ಸಾಧನತ್ರಯಶಕ್ತಿಯಕ್ಷಯಾರ್ಥವನು
ಪಡೆವಂತೆ ಪಡೆದಳವಳಂದು ಪುತ್ರನನು.

೧೪

ದಿಕ್ಕುಗಳು ಪೊಂದಿದವು ಸುಪ್ರಸನ್ನತೆಯ
ಬಲವರುತಲುರಿದಗ್ನಿ ಕೊಂಡನಾಹುತಿಯ
ಸೊಗದೆಲರು ಸುಳಿದಾದುದೆಲ್ಲ ಶುಭವರಿಯ !
ಲೋಕದಭ್ಯುದಯ ದಲ್ ಅಂತಪ್ಪರುದಯ !

೧೫

ಹೊಲೆಮನೆಯ ಹಾಸಿಗೆಯ ಸುತ್ತ ಹಸರಿಸುತೆ
ಆ ಸುಜನ್ಮನದೊಂದು ನಿಜತೇಜಮೆಸೆಯೆ
ನಡುವಿರುಳ ದೀಪಂಗಳೊಡನೆ ಕಳೆ ತೆಗೆಯೆ
ತೋರಿದುವು ಚಿತ್ರಾರ್ಪಿತಂಗಳೆನುವಂತೆ.

೧೬

ಅಣುಗನೊಗೆದುದನು ಸೊದೆಯಕ್ಕರದೊಳೊಲಿದು
ಒರೆವಂತವುರದವರಿಗರಸನೀವಂದು
ಕೊಡೆಯೊಂದು ಚಮರವೆರಡೀ ಮೂರೆ ಉಳಿದು
ಕೊಡಬಾರದಂಥ ವಸ್ತುಗಳಾದುವಹುದು.

೧೭

ಎಲರಿರದ ತಾವರೆಯವೋಲಲುಗದಿರುವ
ಕಣ್ಣುಗಳಿನಂದವಡೆದಾ ಮಗನ ಮೊಗವ
ನಿರುಕಿಸುವ ದೊರೆಯೊಲುಮೆಯುಕ್ಕಿದುದು ಮೊರೆದು
ಕಡಲ ನೀರುಕ್ಕುವೊಲು ಕಾಣಲೊಡನಿಂದು.

೧೮

ಆಶ್ರಮದಿನೈತಂದ ಕುಲ ಪುರೋಹಿತನು
ಮುಗಿಸುತಿರೆ ಜಾತಾದಿ ವಿಧಿಗಳೆಲ್ಲವನು
ನರಪತಿ ದಿಲೀಪಸುತ ಕರಮೆಸೆದನತ್ತೆ
ಸಂಸ್ಕಾರಮಂಗೈದ ಗಣಿಯ ಮಣಿಯಂತೆ.

೧೯

ಇನಿದನಿಯ ಶುಭತೂರ್ಯ ನಿಸ್ವನಗಳಂದು
ಗಣಿಕೆಯರ ಆಮೋದನೃತ್ಯದೊಡವೆರೆದು
ನರಪತಿಯ ಸದ್ಮದೊಳೆ ಮೊರೆದುದೆಂದಲ್ಲ
ಮೊರೆದಿರ್ದುದಮರವರರಧ್ವದೊಳುಮೆಲ್ಲ!

೨೦

ವರರಾಜ್ಯಭಾರದೊಳಗಿಲ್ಲದಿರೆ ಸೆರೆಯು
ತಾನಾರ್ಪ ಬಿಡಿಸುವನು ಸುತಜನ್ಮಸುಖಿಯು!
ತಂದೆತಾತದಿರೊಂದು ಋಣದ ಸೆರೆಯಿಂದೆ
ತಾನೊಬ್ಬ ಬಿಡುಗಡೆಯ ಪಡೆದನಹ ಭರದೆ!

೨೧

ಶಾಸ್ತ್ರಪಾರಂಗತನು ತಾನಹನು ಮಗನು
ಯುದ್ಧದೊಳು ಶಸ್ತ್ರಪಾರಂಗತನುಮಹನು
ಇಂತು ಧಾತುವಿನ ಗಮನಾರ್ಥವನು ಬಗೆದು
ರಘುವೆಂದು ಹೆಸರಿಸಿದನರ್ಥವಿದನೊಲಿದು.

೨೨

ಸಿರಿ ಮೆರೆಯುವಯ್ಯನುರು ಜತನಂಗಳಿಂದೆ
ಶುಭಕರತನುಶ್ರೀಯ ಅವಯವಗಳಿಂದೆ
ಪುಗುವ ರವಿ ಕಿರಣಗಳಿನೆಳೆವೆರೆಯುದೆಂತು
ದಿನದಿನಕೆ ಬೆಳೆಬೆಳೆಯುತಿರ್ದನವನಂತು

೨೩

ಗೌರೀವೃಷಧ್ವಜರು ಷಣ್ಮುಖನಿನೆಂತು
ಶಚೀಪುರಂದರರಾ ಜಯಂತನಿಂದೆಂತು
ತತ್ಸದೃಶ ಮಾಗಧೀನೃಪರುಮುಂದಂತು
ಆ ಎಣೆಯ ಅಣುಗನಿಂದೆಸೆದರು ಸಮಂತು.

೨೪

ಜಕ್ಕವಕ್ಕಿಗಳಂತೆ ಮನವನೆಳೆದೆಸೆವ
ಅವರೊಳು ಪರಸ್ಪರಾಶ್ರಿತವೆನಲು ಮೆರೆವ
ಅವರೊಲುಮೆ ಮಗನಿಂದಲೊಡೆದಿದ್ದರೇನು
ಮತ್ತುಮನ್ಯೋನ್ಯಮೆನೆ ಪೆರ್ಚಿದುದು ತಾನು.

೨೫

ದಾದಿ ಮೊದಲಾಡಿದುದನಾಡಿದನು ಮಗನು
ಅವಳ ಕೈಯನು ಹಿಡಿದು ನಡೆಗಲಿತನವನು
ಹಿರಿಯರೆದುರೆರಗುತೆ ವಿನಮ್ರನೆನಿಸಿದನು
ಅಂತು ರಘುವಯ್ಯನನು ಮೋದಗೊಳಿಸಿದನು.

೨೬

ಸೊದೆಯ ಮಳೆಗರೆಯುವನೊ ಮೈಯೊಳೆನುವಂತೆ
ಮೈಯ ಸೋಂಕಿನೊಳಾದ ಸೊಗಕೆ ನೃಪನಂತೆ
ಕೊಡೆಗೆ ತೆಗೆದಪ್ಪುತಂದಣುಗನನು ಮುದದೆ
ಕೊನೆಗಣ್ಣನಸುಮುಚ್ಚುತೊಲಿಯುವನು ಭರದೆ.

೨೭

ಸದ್ಗುಣದ ನಿಜಮೂರ್ತಿ ಭೇದದಿಂದಜನು
ಸ್ಥಿರಮೆಂದು ಬಗೆದನೆಂತಾತ್ಮಸರ್ಗವನು
ತನ್ನಂಶದಿಂದೊಗೆದ ಸದ್ಗುಣದ ಮಗನು
ಸ್ಥಿರಗೊಳಿಪನನ್ವಯವನೆಂದಿಹನು ನೃಪನು.

೨೮

ಚಲಕಾಕ ಪಕ್ಷನಾ ಚೌಳ ಮುಗಿದಂದು
ಓರಗೆಯ ಮಂತ್ರಿಸುತರೊಡಗೂಡುತೊಲಿದು
ವರ್ಣಗಳನೋರಂತೆ ಕಲಿತು ವಾಙ್ಮಯವ
ಸೇರಿದನು ಸೇರುವೊಲು ತೊರೆಯಿನಂಬುಧಿಯ.

೨೯

ಉಪನಯನಮಾದೊಡನೆ ವಿದ್ಯೆ ಕಲಿಸಿದರು
ಗುರುಜನಪ್ರೀತನನು ಬುಧರು ಗುರುಜನರು
ಈತನೊಳು ಗುರುವರರ ಯತ್ನ ಸಾರ್ಥಕವು
ಸಫಲ ದಲ್ ಸಚ್ಛಿಷ್ಯಗೆರೆದ ಶಿಕ್ಷಣವು.

೩೦

ಮತಿಯಖಿಳಗುಣವೆರೆದುದಾರಧೀಯವನು
ನಾಲ್ಕು ಕಡಲಂತಿರುವ ನಾಲ್ ಬಿಜ್ಜೆಗಳನು
ಗಾಳಿವೇಗವ ಮೀರುವಶ್ವಗಳಿನಿನನು
ನಾಲ್ದೆಸೆಯ ದಾಂಟುವೊಲು ದಾಂಟಿದನು ಸುತನು

೩೧

ಹೊದೆದು ರಘು ಶುದ್ಧವಹ ಕೃಷ್ಣಾಜಿನವನು
ತಂದೆಯೊಳೆ ಕಲಿತನಾ ಮಂತ್ರಾಸ್ತ್ರಗಳನು
ಆವನ ಗುರು ಏಕೈಕನೃಪಮಾತ್ರನಲ್ತು
ಏಕೈಕ ಧನ್ವಿಯುಂ ಜಗದೊಳವನಹುದು.

೩೨

ಪೇರೆತ್ತು ತಾನಾಗುವೆಳೆಹೋರಿಯಂತೆ
ಪೇರಾನೆಯಾಗಲಿರುವಾನೆಮರಿಯಂತೆ
ಹರೆಯವನು ಪಡೆವ ರಘು ಶೈಶವವನುಳಿದು
ಚೆಲುವೆಸೆವ ಮೈಯಂದವನು ತಳೆದನಂದು.

೩೩

ಕೇಶಖಂಡನ ಮುಗಿಸಿ ರಘುವರನ ಪಿತನು
ವೈವಾಹದೀಕ್ಷೆಯನು ನೆರವೇರಿಸಿದನು
ತಮವನಳಿಸುವ ಶಶಿಯ ದಕ್ಷಜೆಯರೆಂತು
ಮೆರೆದರಾ ರಘುವಿನೊಳು ನೃಪಸುತೆಯರಂತು.

೩೪

ನೊಗದೆಣೆಯ ತೋಳವನು ಚೆಲುಹರೆಯದವನು
ಕದದೆಣೆಯ ಎದೆಯವನು ಹೊರವು ಹೆಗಲವನು
ಹೆಗ್ಗೊರಳ ರಘು ಬೆಳೆದು ತನ್ನ ತಂದೆಯನು
ಗೆಲಿದರೂ ತಗ್ಗಿದೊಲು ವಿನಯಪರನಿಹನು.

೩೫

ಬಹುದಿನಗಳಿಂದಾಂತು ಬಹುದೊಡ್ಡಿತೆನುವ
ಜನರ ಪೊರೆಯುವ ಹೊರೆಯ ಲಘುಗೈವೆನೆಂದು
ರಘು ಸಹಜಸಂಸ್ಕಾರವಿನಯಯುತನೆಂದು
ಯುವರಾಜಪದವಿಯಿತ್ತನು ಮಗನಿಗೊಲಿದು.

೩೬

ರಾಜೇಂದ್ರಮೂಲದಾಲಯದಿಂದಲಂದು
ಪ್ರಿಯವೆನುವ ಯುವರಾಜನಾಲಯಕೆ ಬಂದು
ಗುಣಗುಣದೊಳಭಿಲಷಿತೆ ಸಿರಿನಿಂದಳಲ್ತೆ
ಕಂಜದಿಂ ನೈದಿಲೆಯ ತಾನೈದುವಂತೆ.

೩೭

ಸುಳಿವೆಲರ ನೆರವಿನಿಂದುರಿವಗ್ನಿಯೆಂತು
ವರ ಶರದೃತು ನೆರವಿನಿಂದ ರವಿಯೆಂತು
ಕಟವೊಡೆದು ಮದವೊದಗಲಾನೆ ತಾನೆಂತು
ದುಸ್ಸಹನು ಭೂಮಿಪನು ರಘುವೊದಗಲಂತು.

೩೮

ದೊರೆಯಣುಗರೊಡವೆರೆದ ಬಿಲ್ವಿಡಿದ ಮಗನು
ಕುದುರೆಕಾವಲಿಗಿರಲು ದೇವೇಂದ್ರನಿಭನು
ಒಂದೆ ಕೊರೆಯೆನಲಶ್ವಮೇಧಗಳ ನೂರ
ಎಡರಿಲ್ಲದಂತೆಸಗಿ ಮುಗಿಸಿದನು ಧೀರ.

೩೯

ವಿಧ್ಯುಕ್ತರೀತಿಯೊಳು ಯಾಗಗೈದವನು
ಮರಳಿ ಮುಖಕಟ್ಟೆದೆಡರಿಲ್ಲದಶ್ವವನು
ಬಿಲ್ವಿಡಿದರೆದುರಿನೊಳೆ ಶಕ್ರನೈತಂದು
ಕಾಣದೊಲು ಮೈಗರೆದು ಕದ್ದೊಯ್ದನಂದು.

೪೦

ಖೇದದಿಂದೇಗೈವುದೆನುವುದರಿಯದೆಯೆ
ರಘುಸೇನೆ ವಿಸ್ಮಯಂಬಡುತೆ ಮೈಮರೆಯೆ
ಸ್ವೇಚ್ಛೆಯಿಂದೈತಂದ ಖ್ಯಾತನಂದಿನಿಯ
ಯೋಧಜನ ಕಂಡರು ನೃಪಾಲ ವಾಹಿನಿಯ.

೪೧

ಆ ದಿಲೀಪನ ಸುತನು ಸಜ್ಜನಸ್ತುತನು
ಪುಣ್ಯಮಯ ಧೇನುತನುಜನ್ಯಜಲದಿಂದೆ
ಕಣ್ತೊಳೆಯಲಿಂದ್ರಿಯಾತೀತ ಭಾವವನು
ನೋಳ್ಪ ಶಕ್ತಿಯನನನ್ಯವನು ಹೊಂದಿದನು.

೪೨

ರಥದ ಕಡಿವಾಣಗಳನೆಳೆದು ಕಟ್ಟಿರುವ
ಸೂತ ಚಾಂಚಲ್ಯವನು ಸಲೆ ತಡೆಯುತಿರುವ
ಕುದುರೆಯನು ಕೊಂಡೊಯ್ಯುವಿಂದ್ರನನು ಅಂತು
ನರದೇವ ಸಂಭವನು ಕಂಡನು ಸಮಂತು.

೪೩

ಎವೆಮಿಡುಕದಕ್ಷಿಗಳ ನೂರುಜೊತೆಯಿಂದೆ
ಹಸಿರುಬಣ್ಣದ ಏಳು ಅಶ್ವಂಗಳಿಂದೆ
ಅಶ್ವಚೋರನನು ಹರಿಯೆಂದು ತಿಳಿದು
ಮೊಳಗಿದನು ಮುಗಿಲಿರಿವ ದಿಟ್ಟದನಿಗೈದು.

೪೪

ನೀನೆಯೆ ಮಖಾಂಶಭಾಜರೊಳಗ್ರನೆಂದು
ಬುಧರನಿಶಮೊರೆದಪರು ನಿನ್ನ ಕುರಿತೊಲಿದು
ನನ್ನಯ್ಯನೇಗಳುಂ ದೀಕ್ಷೆಯೊಳಗಿಹನು
ಅವನೊಂದು ಯಜ್ಞವನು ಕೆಡಿಸುವುದೆ ನೀನು ?

೪೫

ದಿವ್ಯದೃಷ್ಟಿಯನಾಂತ ಮುಪ್ಪೊಳಲಿನೊಡೆಯ !
ನೀಂ ತರಿವುದಧ್ವರವ ಕಿಡಿಸಲಿಹ ಪಗೆಯ
ಆ ನೀನೆ ಧರ್ಮಚರರೀಕರ್ಮಗಳನು
ಕೆಡಿಸುವರೆ ನಿಲಿಪರಾರ್ ಸತ್ಕರ್ಮಗಳನು ?

೪೬

ಮಖಕಾರ್ಯಕತಿಮುಖ್ಯವಹ ಹಯವ ಕುರಿತು
ಪೆರತೆಣ್ಣದೆಲೆ ಇಂದ್ರ ಇದನುಳಿವುದೊಳಿತು
ವೇದಪಥಗಳನರುಹುವಾ ಮಹಾಜನರು
ಮಲಿನ ಪದ್ಧತಿಗಳನು ತಾನ್ರೊಪ್ಪದಿಹರು.

೪೭

ರಘುವೊರೆದ ಸುಪ್ರೌಢವಾಕ್ಯಗಳನಂದು
ಅಮರೇಂದ್ರನಾಲಿಸುತೆ ವಿಸ್ಮಯಂಬಡೆದು
ತಿರುಗಿಸುತಲಾ ತನ್ನ ರಥವನಿಂತೆಂದು
ಮರುನುಡಿಯನೊರೆಯಲುಜ್ಜುಗಿಸಿದನು ನಿಂದು.

೪೮

ದೊರೆಮಗನೆ ನೀನೊರೆದುದೆಲ್ಲ ದಿಟವಹುದು
ಯಶವನು ಯಶೋಧನರು ಪೊರೆವರಹುದಹುದು
ನಿನ್ನಯ್ಯನಿಜ್ಯದಿಂದಾ ನನ್ನ ಯಶವ
ತಾನಿಂದು ಮೀರಲುದ್ಯುಕ್ತನಾಗಿರುವ.

೪೯

ಎಂತು ಪುರುಷೋತ್ತಮನು ಹರಿಯೊರುವನೆಂಬರ್
ತ್ರ್ಯಂಬಕನೆ ಎಂತಾ ಮಹೇಶ್ವರನು ಎಂಬರ್
ಶತಮಖನು ಎಂದೆನ್ನ ಋಷಿಗಳಂತೊರೆವರ್
ಈ ನುಡಿಗಳನ್ಯರೊಳು ಸಲ್ಲವೆಂದರಿಯಯ್

೫೦

ಈ ಯಜ್ಞತುರಗವನು ಕಪಿಲಮುನಿಯಂತೆ
ಅಪಹರಿಸಿಕೊಂಡೊಯ್ದೆನದರಿಂದಲತ್ತೆ
ಇದಕಾಗಿ ಯತ್ನವನು ಬಿಟ್ಟುಬಿಡು ನೋಡ !
ಸಗರಕುವರರ ಎಡೆಯೊಳಡಿಯನಿಡಬೇಡ.

೫೧

ಆಬಳಿಕ ತುರಗರಕ್ಷಕನು ರಘು ನಕ್ಕು
ಇಂದ್ರನೊಡನಾಡಿದನು ತೋರುತಿರಲುರ್ಕು
ನಿನ್ನ ನಿಲವಿಂತಾದರಸ್ತ್ರವನು ಧರಿಸಯ್
ರಘುವ ನೀಂ ಗೆಲ್ಲದೆಯೆ ಕೃತಕೃತ್ಯನೆಂತಯ್.

೫೨

ದೇವೇಂದ್ರಗಿಂತೊರೆದು ತಲೆಯೆತ್ತಿದವನು
ಹೆದೆಯೆಳೆದು ಬಾಣವನು ಬಿಲ್ಲಿಗಿಟ್ಟವನು
ಆಲೀಢದಿಂದತುಳಶೋಭೆವಡೆದವನು
ಮೈ ನಿಮಿರಿ ಶಂಭುವ್ರ್ಗೊಲು ನಿಂತೆಸೆದನವನು.

೫೩

ಕಂಬದೊಲು ರಘುವಿನಂಬೆದೆಯನೊಳವೊಗಲು
ಗಿರಿಯ ತರಿದಿಂದ್ರನಿಗುಮುನಿಸಿರದೆ ಮಿಗಲು
ಹೊಸವೋಡದೋಳಿಯೊಳಗರಗಳಿಗೆ ಹೊಳೆವ
ಬಿಲ್ಲಿನೊಳು ತೊಟ್ಟನು ಅಮೋಘಸಾಯಕವ.

೫೪

ಕ್ರೂರದನುಜರ ಮೈಯ ನೆತ್ತರಿನ ಸವಿಯ
ಕಂಡಕಣೆ ರಘುವಿನ ವಿಶಾಲವಾದೆದೆಯ
ನಾಂಟಿ ತಾನಿನ್ನೆವರಮೀಂಟದಿಹ ನರನ
ನೆತ್ತರ ಕುತೂಹಲದಿನೆನೆ ಕುಡಿದುದವನ.

೫೫

ಷಣ್ಮುಖನ ತೆರನೆಸೆಯುವಮಿತವಿಕ್ರಮನು
ಸುರಗಜವ ತಟ್ಟಿ ಕಡುಬೆಟ್ಟಿತಾಗಿರುವ
ಆ ಶಚಿಯ ಪವುಸೆಲತೆಯಂಟಿಕೊಂಡಿರುವ
ಮುಯ್ಪಿನೊಳು ನಾಟಿದನು ಕೂರಂಬುಗಳನು.

೫೬

ಪೆರತೊಂದು ನವಿಲುಗರಿ ಕಣೆಯ ರಘುವೆಸೆಯೆ
ಇಂದ್ರನ ಮಹಾಶನಿಧ್ವಜವ ಕೆಡೆಹೊಡೆಯೆ
ದೇವರಾಜ್ಯಶ್ರೀಯ ಮುಡಿಯನೆಳೆದಂತೆ
ದೇವೇಂದ್ರನುರುಕೋಪಗೊಂಡನಂದಲ್ತೆ !

೫೭

ವಿಜಯಕಾಂಕ್ಷಿಗಳೆನಿಸಿದಿಂದ್ರರಘುವರರು
ಗರುಡಸರ್ಪಗಳಂತೆ ನೋಡೆ ಭೀಕರರು
ಕೆಳಮೊಗಗಳಾಗಿ ಮೇಣ್ ಮೇಲ್ಮೊಗಗಳಾಗಿ
ಕಣೆಗರೆದರುಭಯಬಲ ನೋಡುತಿರೆ ಮಸಗಿ.

೫೮

ವಾಸವನು ಕರೆದಗುಂದಲೆಯ ಕಣೆಮಳೆಯ
ಸಹಿಸಲಸದಳವೆನಿಪ ತೇಜದಾಸರೆಯ
ಆತ್ಮಾಂಶಭವನನೆಯೆ ಗೆಲಲರಿಯನಲ್ತೆ
ಆತ್ಮಾಂಶದಶನಿಯನೆ ಮುಗಿಲು ಗೆಲದಂತೆ.

೫೯

ಬಳಿಕ ಹರಿಚಂದನದ ಕಣಕೈಯೊಳೆಸೆವ
ಕಡೆದ ಕಡಲಂದದೊಳು ಘನರವದೆ ಮೊರೆವ
ಹರಿಯ ಬಿಲ್ಲಿಗೆ ಬಿಗಿದ ಹೆದೆಯ ಆಹುರಿಯ
ಕಡಿದಿಟ್ಟ ರಘುವೆಸೆದು ಕುಡುವೆರೆಯ ಕಣೆಯು

೬೦

ಕಡುಕನುಲಿ ಹರಿ ತನ್ನ ಚಾಪವನು ತೊರೆದು
ಆರ್ಪಿನತಿಶಯದರಿಯ ಕೊಲಲೆಂದು ಬಗೆದು
ಬೆಟ್ಟಗಳೆರಂಕೆಯನು ತರಿಯಲಿರ್ದುದನು
ಕೊಂಡನದೊ ಹೊಗರ ಬಳೆ ಹೊಳೆವ ಕೈದುವನು.

೬೧

ಎದೆಗೂರಿದಾ ಕುಲಿಶದೇಟಿನೊಳು ನೊಂದು
ಬಲದಶ್ರುವೊಡೆನೆ ರಘು ನೆಲಕುರುಳ್ದನಂದು
ಬಿದ್ದ ಮರುಘಳಿಗೆಯಲಿ ಆ ನೋವಕಳೆದು
ಮೇಲೆಳ್ದನಾ ಬಲದ ಜಯರವಂಬೆರೆದು.

೬೨

ಕೈದುವಿನ ಹರಿಬದೊಳು ಕಡುನೊಂದರೇನು
ಪಗೆತನವನೇಬಗೆದು ಬಲಿದು ನಿಂದಿಹನು
ಎಂದು ಹರಿ ಮೆಚ್ಚಿದನು ಅವನಾರ್ಪನಂದು
ಎಲ್ಲಕಡೆ ಗುಣವೆ ದಲ್ ಪೂಜೆಗೊಂಡಪುದು.

೬೩

ಸಾರವತ್ತಾದುದರಿನದ್ರಿಯನುವೊಡೆವ
ಕೈದುವಿದ ತಡೆವ ಕಲಿ ಮತ್ತಾವನಿರುವ ?
ನೀಂ ತಡೆದ ಕತದಿಂದೆ ಸುಪ್ರೀತನಾದೆ
ಹಯವುಳಿದು ವರವನೆರೆ ಎಂದು ಹರಿಯೊರೆಯೆ.

೬೪

ಹೊಂಗರಿಯ ಹೊಗರಿನೊಳು ಬೆರಳ ಬೆಳಗಿರುವ
ದೊಣೆಯಿಂದಲರೆಯೆಳೆದು ಮೇಲೆತ್ತಲಿರುವ
ಬಾಣವನು ಹಿಂದಿರಿಸಿ ಮನುಜೇಂದ್ರಸೂನು
ಸುರಪನನು ಕುರಿತಿತ್ತನಿಂತುತ್ತರವನು.

೬೫

ಬಿಡದಿಹುದೆ ಮನದೆಣಿಕೆಯೆನಲು ಕುದುರೆಯನು
ದೀಕ್ಷೆಯೊಳಗನಿಶಮಿರುವೆನ್ನಯ್ಯನವನು
ವಿಧ್ಯುಕ್ತರೀತಿಯೊಳು ಮುಗಿಸಿ ಕರ್ಮವನು
ಪಡೆವೆಲ್ಲ ಫಲ ದೊರೆಯುವಂತೆಸಗು ನೀನು.

೭೬

ಹರನಂಶನೆನಿಸಿರುವ ಹೊಗಲಮ್ಮೆನೆನುವ
ಯಜ್ಞಸಭೆಯೊಳಗಿರುವ ಆ ನಮ್ಮ ಗುರುವ
ನಿನ್ನೊರುವ ಸೇವಕನೆ ಸಾರಿ ಸುದ್ದಿಯನು
ತಿಳಿಪುವೋಲೇರ್ಪಡಿಸು ಲೋಕೇಶ ನೀನು.

೭೭

ರಘುವರಮನೋರಥವನಂತಾಗಲೆಂದು
ಸಲಿಸುತವನೈದಿದನು ಮಾತಲಿಯವೆರೆದು
ಇತ್ತ ನೃಪಸಭೆಗೆಂದು ಸಂತೋಷದಿಂದೆ.
ತೆರಳಿದನು ಆ ಸುದಕ್ಷಿಣೆಯಣುಗನಂದೆ.

೭೮

ಹರಿಯ ಶಾಸನಹಾರಿ ತಾನಂದೆ ಭರದೆ
ತಿಳಿಸೆ ಜನಪನು ಮುದದೆ ತಣ್ಗೈಗಳಿಂದೆ
ಕುಲಿಶದೇರುಗಳಣುಗನೊಡಲ ತಡವುತ್ತೆ
ಮಗನ ಕುರಿತಾನಂದದೊಳಗದ್ದನತ್ತೆ ?

೭೯

ಮಹನೀಯ ಶಾಸನನು ಭೂಪಾಲನಂದು
ಆಯು ಕೊನೆಗೊಳುವಂದು ದಿವಿಯೇರಲೆಂದು
ತೊಂಬತ್ತು ಮೇಲೆ ಮತ್ತೊಂಬತ್ತು ಎಂದು
ಮೆಟ್ಟಿಲನು ಹರಹಿದನು ಯಜ್ಞಗಳ ಗೈದು.

೮೦

ಬಳಿಕ ವಿಷಯಸುಖಪರಾಙ್ಮುಖನು ದಿಲೀಪನರಪನಾತನು
ಯುವಕಸೂನುಗರಸುಕುರುಹಿನೆಸೆವ ಬೆಳ್ಗೊಡೆಯನು
ಕೊಟ್ಟನು
ದೇವಿಯೊಡನೆ ಮುನಿಗಳಿರುವ ವನದ ಮರದ ನೆರಳ
ಸಾರ್ದನು
ಇಳಿವಯಸ್ಸೊಳಿನನ ಬಳಿಯ ನೃಪರಿಗಿದುವೆ ದಲ್
ಕುಲವ್ರತಂ.

## ನಾಲ್ಕನೆಯ ಸರ್ಗ

# ರಘುದಿಗ್ವಿಜಯ

೧

ಗುರುವಿತ್ತ ರಾಜ್ಯವನು ಪಡೆದಧಿಕಕಾಂತಿಯಿಂದೆಸೆದನಂದವನು
ಸಂಜೆಯೊಳು ಸವಿತಾರನಿರಿಸಿರ್ದ ತೇಜದಿಂದಗ್ನಿಯೆಸೆವಂತೆ.

೨

ರಘು ದಿಲೀಪನ ಬಳಿಕ ರಾಜ್ಯದೊಳು ನೆಲೆಗೊಂಡನೆನುವುದನು ಕೇಳ್ದು
ಅರಸರ್ಕಳೆದೆಗಳಲಿ ಆ ಮೊದಲು ಹೊಗೆದಗ್ನಿಯುರಿಹೊತ್ತಿತಂದು.

೩

ಪುರುಹೂತಕೇತನವನೆಂತಂತು ಅವನ ಪ್ರೊಸತೇಳಿಗೆಯನಂದು
ಕಂಗಳನು ಮೇಲೆತ್ತಿ ನೋಡಿದರು ಮಕ್ಕಳೊಡನಾ ಜನರು ನಲಿದು.

೪

ಆಕ್ರಮಿಸಿಕೊಂಡನಂದೇಕಕಾಲದೊಳವನು ಆನೆನಡೆಯವನು
ತಂದೆಯಿಂ ಬಂದ ಸಿಂಹಾಸನವನಖಿಳಾರಿಮಂಡಲವ ನೃಪನು.

೫

ತಾನಗೋಚರಳೆನಿಸಿ ಸೇವಿಸಿದಳಾ ಕಾಂತಿಪುಂಜಾನುಮೇಯಳ್
ಸಾಮ್ರಾಜ್ಯದೀಕ್ಷಿತನನಾ ಪದ್ಮೆ ಪದ್ಮಾತಪತ್ರದಿಂದಾಗಳ್.

೬

ಕಾಲಕಾಲಕೆ ಬಂದು ಸನ್ನಿಧಿಯ ದಯಗೈದು ವಂದಿಜನಮುಖದೆ
ಸ್ತುತ್ಯನನು ಅರ್ಥಯುತ ವಚನದಿಂ ಸೇವಿಸಿದಳಾ ವಾಣಿ ಮುದದೆ.

೭

ಮನ್ವಾದಿ ಮಾನ್ಯರಾಜರ್ಕಳಿಂದನುಭೋಗ್ಯಳಾದೊಡಂ ಮತ್ತೆ
ಭೂರಮಣಿ ಪೂರ್ವದೊಳು ಪೆರರಿವಳನನುಭವಿಸದಂತಿರ್ದಳಲ್ತೆ !

೮

ಯುಕ್ತದಂಡನೆಯಿಂದೆ ಸರ್ವಲೋಕದ ಮನವನೆಳೆದನವನಲ್ತೆ
ನಾತಿಶೀತೋಷ್ಣಮೆನೆ ಸುಳಿದುಬಹ ದಾಕ್ಷಿಣನಭಸ್ವಾನನಂತೆ.

೯

ಅಧಿಕಗುಣಯುತನಿಂದೆ ಜನರು ಮಂದೋತ್ಕಂಠರಾದರಯ್ಯನೊಳು
ಸಹಕಾರಫಲದಿಂದಲಾ ಸುಮೋದಯದೊಳೆಂತಂತೆವ್ರೋಲವರು.

೧೦

ನಯವಿದರು ನವನೃಪನಿಗರುಹಿದರು ಸತ್‌ಅಸತ್‌ರಣವಿವರಗಳನು
ಪೂರ್ವಪಕ್ಷವನೆ ದೊರೆಯೊಪ್ಪಿದನು ತೊರೆದನುತ್ತರಪಕ್ಷವದನು.

೧೧

ಪಂಚಭೂತಂಗಳುಂ ನಿಜಗುಣೋತ್ಕರ್ಷವನು ಹೊಂದಿದವು ಮುದದೆ
ಹೊಸತಾಗಿ ರಘುರಾಜನಾದನೆನೆ ಎಲ್ಲವೂ ಹೊಸತಾದ ತೆರದೆ.

೧೨

ಚಂದ್ರನಾಹ್ಲಾದದಿಂದೆಂತಾ ಪ್ರತಾಪದಿಂದೆಂತು ಭಾಸ್ಕರನು
ಪ್ರಕೃತಿರಂಜನೆಯಿಂದಲಂತೆ ರಘುವನ್ವರ್ಥನಾಮನೆನಿಸಿದನು.

೧೩

ಇಳೆಯೊಡೆಯನಗಲಕಂಗಳ ಕೊನೆಗಳಾ ಕಿವಿಯವರೆಗಿದ್ದರೇನು
ತಗುವ ಮೇಣ್ ತಗದ ನವುರೆಸಕಗಳನೀಕ್ಷಿಪನು ಶಾಸ್ತ್ರಲೋಚನದೆ.

೧೪

ಪಡೆದಿಳೆಯ ಸುವ್ಯವಸ್ಥೆಯೊಳು ತಾನುಪಶಾಂತಚಿತ್ತನಾದನನು
ಸಾರ್ದಳೆಂದೆರಡನೆಯ ಪಾರ್ಥಿವಶ್ರೀಯವೋಲಬ್ಜಲಾಂಛನೆ ಶರಲ್ಲಕ್ಷ್ಮಿ!

೧೫

ಮಳೆಗರೆದು ಹಗುರಾದ ಮೋಡಗಳು ಚೆದುರುತಿರಲೆಸೆವ ಪಥದೆಡೆಯ
ಅವನಿಪನ ಮೇಣಿನನ ತಾಪಮಂದೊಡನೊಡನೆ ಮುಸುಕಿದುದು ದೆಸೆಯ.

೧೬

ಮಳೆವಿಲ್ಲನಿಳುಹಿದನು ದೇವೇಂದ್ರನೆತ್ತಿದನು ರಘು ಚೈತ್ರಧನುವ
ಪರ್ಯಾಯಕಾರ್ಮುಕೋದ್ಧೃತರಹರು ಜನರರ್ಥಸಾಧನದೊಳವರು.

೧೭

ಫುಲ್ಲಸುಮಕಾಶಚಾಮರವನಬ್ಜಾತಪತ್ರವನು ಋತು ತಳೆದು
ರಘುವರನನಣಕಿಸಿದರೇನವನ ಸಿರಿಯ ತಾಂ ಪಡೆದುದಿಲ್ಲಂದು.

೧೮

ಸಹಜ ಪ್ರಸಾದಸುಮುಖನೊಳು ಮೇಣ್ ನಿರ್ಮಲಪ್ರಭೆಯ ಚಂದ್ರನೊಳು
ಸಮರಸಪ್ರೀತಿಯನು ಸಂದರ್ಶನೋತ್ಸುಕರು ತಳೆದರೀರ್ವರೊಳು.

೧೯

ಹಂಸಪಂಕ್ತಿಗಳಲ್ಲಿ ಕುಮುದವಾರಿಗಳಲ್ಲಿ ತಾರಕೆಗಳಲ್ಲಿ
ಪಸರಿಸಿದವ್ರೋಲಿರ್ದವಾತನ ಯಶೋಭೂತಿ ತಾನವುಗಳಲ್ಲಿ.

೨೦

ಶಾಲಿವನಪಾಲಿಕೆಯರಲ್ಲಿ ತನಿಗರ್ವುಗಳ ನೆಳಲಿನಲಿ ಕುಳಿತು
ಪಾಡುವರು ಚಿಕ್ಕಂದಿನಿಂದೆಸೆದು ಬೆಳೆದ ಗುಣಕೀರ್ತಿಯನು ನಲಿದು.

೨೧

ನೀರು ನಿರ್ಮಲವಾದುದಾ ಮಹೌಜಸಕುಂಭಯೋನಿಯೊಗೆದಂದು
ಸೋಲನೂಹಿಸುತಲಾ ಹಗೆಯ ಬಗೆ ತೇಜಸ್ವಿಯೊಗೆಯೆ ಕದಡಿದುದು.

೨೨

ಮದವೇರಿ ಸೊಕ್ಕಿರುವ ಹಿರಿಯ ಹಿಣಿಲುಗಳಿರುವ ಹೊಳೆಕರೆಯನಣೆವ
ಹಿರಿಯ ಹೋರಿಗಳಂದಣಕಿಸಿರ್ದವವನ ಲೀಲಾಖೇಲದಳವ.

೨೩

ಮದದ ಪರಿಮಳವೆರೆದ ಏಳೆಲೆಯ ಬಾಳೆಗಳ ಹೂಗಂಪು ಹೊಡೆಯೆ
ಸುರಿಸಿದವು ಮದಜಲವನಾನೆಗಳು ಕರುಬಿದವೊಲೇಳ್ಬಗೆಯೊಳೆಸೆಯೆ.

೨೪

ದಾರಿಗಳ ಕೆಸರುಗಳನೊಣಗಿಸುತೆ ನದಿಗಳನು ಗೈದು ದಿಣ್ಣೆವೊಲು
ದಿಗ್ವಿಜಯಕಾತನನು ಚೋದಿಸಿತು ಶಾರದವು ಇಂದ್ರನಿಂ ಮೊದಲು.

೨೫

ವಾಜಿನೀರಾಜನದ ಕರ್ಮದೊಳು ಬೆಳಗಿದನು ತೊಳಗಿ ಹುತವಹನು
ಈಯುವೊಲು ಬಲವಂದು ಮೇಲೊಗೆಯುವುರಿಗೈಗಳಿಂವೆ ವಿಜಯವನು.

೨೬

ಬಳಿಯ ಗಿರಿದುರ್ಗವನು ಮೂಲವನು ಕಾಪಿಡುತೆ ಬೆನ್ನ ಹಗೆ ತೊಡೆದು
ತೆರಳಿದನು ಆರುತೆರನಿರುವ ಬಲದೊಡಗೂಡಿ ದಿಗ್ವಿಜಯಕೆಂದು.

೨೭

ಕ್ಷೀರೋರ್ಮಿ ಮಂದರೋದ್ಧೂತಜಲಬಿಂದುಗಳಿನಚ್ಯುತನನೆಂತು
ನೆನೆಸಿದರು ವೃದ್ಧಪೌರಾಂಗನೆಯರರಲಮಳೆಯಿಂದವನನಂತು.

೨೮

ದೇವೇಂದ್ರಸದೃಶನಾ ದೇವೇಂದ್ರದಿಕ್ಕಿಗೆಂದೈದಿದನು ಮೊದಲು
ಗಾಳಿಯಲಿ ಚಲಿಯಿಸುವ ಬಾವುಟಗಳರಿಗಳನು ಗದರಿಪಂತಿರಲು.

೨೯

ತೇರಿನಿಂದೆದ್ದಿರುವ ಧೂಳಿನಿಂದಾಗಸವನಿಳೆಯವ್ವೊಲು ಗೈದು
ಮುಗಿಲುಗಳಿಗೆಣೆಯಾದ ಗಜಗಳಿಂದಿಳೆಯ ಬಾನಂತೆವೊಲು ಗೈದು.

೩೦

ಆ ಪ್ರತಾಪಂ ಮೊದಲು ಶಬ್ದ ಮತ್ತಾಬಳಿಕ ಧೂಳು ಆಮೇಲೆ
ರಘುಸೇನೆ ಮುಂಬರಿದುದೀತೆರದೆ ನಾಲ್ಬಗೆಯ ವಿರಚನೆಯವೋಲೆ.

೩೧

ಮರುವನವನುದಕಮಯವೆನೆ ಗೈದು ಕಾಡುಗಳನುರೆಬಯಲ್ ಗೈದು
ನೌಕಾನದೀಜಲವ ಬಲಯುತನು ಸುಲಭದಲಿ ದಾಂಟುವೊಲು ಗೈದು.

೩೨

ಪೂರ್ವಸಾಗರದತ್ತ ಹರಿಯುವ ಮಹಾಸೇನೆಯನ್ನೊಯ್ವ ನೃಪನು
ಹರಜಡೆಯಿನಿಳಿವ ಗಂಗೆಯನೊಯ್ವ ಆ ಭಗೀರಥನವೋಲಿಹನು.

೩೩

ಉದುರಿಸಿದ ಫಲಗಳಿಂದಗೆದಿರುವ ಬೇರ್ಗಳಿಂ ಬಹುಬಗೆಯೊಳೆತ್ತಿ
ಕಿತ್ತ ವೃಕ್ಷಂಗಳಿಂದಾನೆಗಳಿಗೆಂತಂತು ದೊರೆಗಧ್ವ ಸುಗಮುವೆನಿಸಿತ್ತು

೩೪

ಅಲ್ಲಲ್ಲಿಗಿರುವ ಆ ಮೂಡಣದ ಜನಪದಂಗಳನಿಂತು ಗೆಲಿದು
ತಾಳೀವನಶ್ಯಾಮರಂಜಿತ ಮಹೋದಧಿಯ ಬಳಿಸೇರ್ದನಂದು.

೩೫

ಬಾಗದರ ಬೇರ್ವ್ವಿರಸು ಕೀಳುತ್ತೈತರುವವನೊಳಾ ಸುಹ್ಮ ನೃಪರು
ಹೊಳೆಯ ಭರಕೆಂತಂತು ವೈತಸೀವೃತ್ತಿಯೊಳು ವ್ಯೆಯನುಳುಹಿದರು.

೩೬

ನೌಸಾಧನೋದ್ಯತರನಾ ವಂಗಭೂಪರನು ನೇತಾರನವನು
ಗೆಲಿದಂದು ನಿಲಿಸಿದನು ಗಂಗೋರ್ಮಿಮಾಲೆಯೊಳು ಗೆಲ್ಗಂಬಗಳನು.

೩೭

ಕಿತ್ತು ಮರುನಾಟಿರುವ ಕಲಮಂಗಳಡಿಗೆರಗಿ ಫಲವೀಯುವಂತೆ
ಕಿತ್ತು ಮರುನೆಲಸಿರುವ ವಂಗಜರು ರಘುಗೆರಗಿ ಫಲವಿತ್ತರಲ್ತೆ !

೩೮

ಕರಿಕುಲದ ಸೇತುವೆಯ ಕಟ್ಟಿ ಕಪಿಶಾನದಿಯ ಕಳೆದ ಬಳಿಕವನು
ಆ ಕಲಿಂಗಾಭಿಮುಖನಾದನಂದುತ್ಕಲರು ಪೇಳೆ ದಾರಿಯನು.

೩೯

ಪೌರುಷವನಾಮಹೇಂದ್ರಾಚಲದ ಮಸ್ತಕದೆ ತಿಣ್ಣವಿರಿಸಿದನು
ಗಂಭೀರವೇದಿಕರಿ ಶಿರದೊಳಂಕುಶವನಿರಿಪಂತೆ ಮಾವುತನು.

೪೦

ಬಳಿಕ ಗಜಸಾಧನನು ಕಾಳಿಂಗನಸ್ತ್ರಂಗಳಿಂದಲೆದುರಿಸಿದನಾತನನು
ರೆಕ್ಕೆಗಳ ತರಿಯಲಿರುವಿಂದ್ರನನು ಕಲ್ಲುಮಳೆ ಕರೆವ ಗಿರಿಯಂತೆ.

೪೧

ಕಾಕುತ್‌ಸ್ಥನಲ್ಲಿ ಆ ವೈರಿಬಲನಾರಾಚದುರ್ದಿನವ ಸಹಿಸಿ
ಸನ್ಮಂಗಲಸ್ನಾತನಂತೆ ಜಯಲಕ್ಷ್ಮಿಯನು ಪಡೆದಿರ್ದನೊಲಿಸಿ.

೪೨

ಪಾನಭೂಮಿಯ ರಚಿಸಿ ರಘುನೃಪನ ಯೋಧರ್ಕಳಂದಲ್ಲಿ ನಲಿದು
ತೆಂಗುಗಳ್ಗೀಂಟಿದರು ನಾಗವಲ್ಲಿಯ ದಳದೊಳರಿಯ ಜಸವೆರೆದು.

೪೩

ಹಿಡಿದು ಬಿಡುಗಡೆಗೈದ ಆ ಮಹೇಂದ್ರೇಶ್ವರನ ಸಿರಿಯನಪಹರಿಸಿ
ಮೆರೆದನೌದಾರ್ಯವನು ಧರ್ಮವಿಜಯೀನೃಪನು ಮೇದಿನಿಯನುಳಿಸಿ

೪೪

ಬಳಿಕ ಫಲವತ್‌ಪೂಗ ಮಾಲೆಯಿಂದೆಸೆವ ವೇಲಾತಟವನುಳಿದು
ತೆರಳಿದನಗಸ್ತ್ಯಮುನಿ ನಡೆದ ದೆಸೆಗಾಶಿಸದೆ ಜಯಪಡೆಯುವವನು.

೪೫

ಗಜದಾನಗಂಧಮಯ ಸೈನ್ಯಪರಿಭೋಗದಿಂದಂದು ಧರೆಯೊಡೆಯ
ಆಸರಿತ್‌ಪತಿ ಶಂಕೆಗೊಳುವಂತೊಡರ್ಚಿದನು ಕಾವೇರಿನದಿಯ.

೪೬

ಸಾರಿರ್ದುದಧ್ವವನು ದಾಂಟಿರ್ದ ವಿಜಿಗೀಷುರಘುಸೈನ್ಯನಿಚಯ
ಮಾರೀಚವನಚಯೋದ್ಭ್ರಾಂತಹಾರೀತರಾಜಿತ ಮಲಯಗಿರಿಯ

೪೭

ಕುದುರೆಗಳು ತುಳಿದೆದ್ದ ಏಲಕ್ಕಿ ಬಳ್ಳಿಗಳ ಕಾಯಿಗಳ ಹುಡಿಯು
ಸರಿದೊರೆಯ ಕಂಪುಗುವ ಮದಗಜದ ಕಟಗಳಲಿ ಮೆತ್ತಿರ್ದುದಂದು.

೪೮

ಚಂದನದ ಮರಗಳಲಿ ಅಹಿ ಸುತ್ತಿ ಕೊರೆದಿರುವ ಹಳ್ಳಗಳಿಗೆಳೆದು
ಬಿಗಿದಿಭದ ಕಾಲ್ತೊಡರು ಹರಿದರೂ ಕೊರಳ ಹುರಿ ಹರಿಯದಿಹುದು.

೪೯

ದಕ್ಷಿಣದ ದಿಕ್ಕಿನೊಳು ಭಾಸ್ಕರನ ತೇಜವ್ಯೂ ಕುಗ್ಗಿದವುದೆನಲು
ರಘುವಿನೊಂದಾರ್ಪನಂದಾನದಿಹರಾ ಪಾಂಡ್ಯರದುವೆ ದಿಕ್ಕಿನೊಳು.

೫೦

ತಾಮ್ರಪರ್ಣಿಯ ಬೆರೆಯುವಾ ಮಹೋದಧಿಯ ಹೊಸಮುತ್ತುಗಳ ಸುರಿದು
ತಾವೆ ಗಳಿಯಿಸಿದವುಳಯಶವನೀವಂತೆವೋಲಿತ್ತರುರೆವುಣಿದು.

೫೧

ಚಂದನಾಲೀನತಟವೆಸೆಯುವ ದಿಶಾಂಗನೆಯ ಕುಚಯುಗ್ಮವೆನುವ
ಮಲಯದುರ್ದರಗಳೆನುವದ್ರಿಗಳ ಸ್ವೇಚ್ಛೆಯಿಂದನುಭವಿಸಿ ಸುಖವ.

೫೨

ಸಾಗರನು ದೂರಗೈದುಳಿದಿರುವ ಜಗುಳ್ದುಡೆಯ ಮೇದಿನಿಯದೊಂದು
ಜಘನದಂತಿರುವ ಆ ಸಹ್ಯವನು ದಾಂಟಿದನಸಹ್ಯಬಲನಂದು.

೫೩

ಪಡುವಣರ ಗೆಲುವಿನೊಳು ತೊಡಗಿ ಹರಹಿದ ಸೇನೆ ತಾನೆಸೆದುದಲ್ತೆ
ರಾಮಶರದಿಂದಬ್ಧಿ ಸರಿದರೂ ಸಹ್ಯವನು ಕೂಡಿತೆನುವಂತೆ.

೫೪

ತೊಡವುಗಳನವನ ಭಯದಿಂದುಳಿದ ಕೇರಳಸ್ತ್ರೀಜನರೊಳಂದು
ಪ್ರತಿಚೂರ್ಣದಂತಿರ್ದುದಾ ಚಮೂತತಿರೇಣು ಕುಂತಳದೊಳೆಸೆದು.

೫೫

ಕೇದಗೆಯ ಹೂಹುಡಿಯ ಹೊತ್ತ ಮುರಲಾನಿಲನು ದಳದ ಬಳಿ ಸುಳಿದು
ಆ ವಾರವಾಣಗಳಿಗೆಸಗಿದನು ಪರಿಮಳದ ಲೇಪನವನಂದು.

೫೬

ಸಂಚರಿಪ ವಾಹಗಳ ಬೆನ್ನಿನೊಳು ಮರ್ಮರಿಪ ವರ್ಮಂಗಳಂದು
ಮಾರುತೋದ್ಧೂತತಾಲೀವನಧ್ವನಿಯ ಮುಚ್ಚಿದವು ಮೊರೆದು.

೫೭

ಖರ್ಜೂರತರುಬದ್ಧಗಜತತಿಯನೆರಗಿದುದು ದುಂಬಿವಿಂಡೊಲಿದು
ಸುರಭಿದಾನೋದ್ಗಾರಿಕಟಗಳಲಿ ಪುನ್ನಾಗಪುಷ್ಪಗಳ ತೊರೆದು.

೫೮

ಅವಕಾಶವನ್ನಿತ್ತನಭ್ಯರ್ಥಿರಾಮನಿಗುದನ್ವಾನನತ್ತೆ
ರಘುನರನಿಗಪರಾಂತನರಪನ ನಿಮಿತ್ತದೊಳು ಕರವಿತ್ತನತ್ತೆ.

೫೯

ಸೊಕ್ಕೇರಿದಾನೆಗಳು ಕೋಡುಗಳಿನುಡಿದಾರ್ಪನಂಕಿಸಿರಲಂತು
ಗೆಲ್ಗಂಬಮಂಗೈದನಾ ತ್ರಿಕೂಟಾಚಲಮುನದನೆಯೆ ಸಮಂತು.

೬೦

ಬಳಿಕ ತತ್ತ್ವಜ್ಞಾನದಿಂದಲಿಂದ್ರಿಯರಿಪುವ ಸಂಯಮಿಯದೆಂತು
ಪಾರಸಿಕರನು ಜಯಿಸಲೈದಿದನು ಭೂಮಾರ್ಗದಿಂದೆ ರಘುವಂತು.

೬೧

ಸಹಿಸನವನಾ ಯವನವನಿತೆಯರ ಮುಖಪದ್ಮಮಧುರಮಧುಮದವ
ಸಹಿಸದೊಲಕಾಲಜಲದೋದಯವು ಕಮಲವನ ಕೋಮಲಾತಪವ.

೬೨

ಆ ಧನುಷ್ಟಂಕಾರಮಾತ್ರದೊಳೆ ಅರಿಯುನರಿವನಿತು ರಜ ಕವಿಯೆ
ಪಾಶ್ಚಾತ್ಯರಶ್ವಬಲದೊಡನೆ ರಘು ತುಮುಲಸಂಗ್ರಾಮವನು ಮೆರೆಯೆ,

೬೩

ಭಲ್ಲಯದೆ ತುಂಡರಿಸಿದಾಶ್ಮಶ್ರುಮಯ ಶಿರಗಳಿಂದಲವನಿಯನು
ಜೇನುಹುಳು ಮುಸುರಿರುವ ಜೇಂಗೊಡಗಳೆಂಬವೊಲು ಮುಚ್ಚಿರ್ದನವನು.

೬೪

ಅಳಿದುಳಿದ ನರಪರು ಶಿರಸ್ತ್ರಾಣಗಳ ತೆಗೆದು ಮೊರೆವೊಕ್ಕರಂದು
ಮಹನೀಯರಾಗ್ರಹವು ಶತ್ರುನತಿಮಾತ್ರದಿಂದಿರದಳಿವುದಹುದು.

೬೫

ದ್ರಾಕ್ಷಿಯ ವನಂಗಳೊಳು ಕೃಷ್ಣಾಜಿನೋತ್ಕರದ ಪಾಸಿನೊಳು ಕುಳಿತು
ವಿಜಯದಾಯಾಸವನು ಮಧುಕುಡಿದು ನೀಗಿದರು ಯೋಧರು ಸಮಂತು.

೬೬

ಭಾಸ್ಕರನು ಕರಗಳಿಂದುದಕವನು ಸೆಳೆವವೊಲು ರಘುನೃಪನುಮಂದು
ಶರಗಳಿಂದರಸರನು ಸೆಳೆಯಲೆಂದುತ್ತರಕೆ ನಡೆತಂದನೊಲಿದು.

೬೭

ಸಿಂಧುವಿನ ತೀರದೊಳು ಕಳೆದು ಹೊರಳುವುದರಿಂದಧ್ವದಲಸಿಕೆಯ
ಕುದುರೆಗಳು ಕೊಡಹಿದವು ಕುಂಕುಮದ ಕೇಸರಗಳಂಟಿರುವ ಮೈಯ.

೬೮

ಅಲ್ಲಿ ತಮ್ಮಿನಿಯರೊಳು ರಘು ತೋರಿದಾರ್ಪಿನೊಂದೆಸಕಮದು ಬಂದು
ಗುರುವಾದುದಾ ಹೂಣರಾಣಿಯರ ಕೆನ್ನೆಯೊಳು ಕೆಂಪೆಸೆಯಲಂದು.

೬೯

ಕಾಂಭೋಜದವನಿಪರು ರಘುವರನ ವೀರ್ಯವನು ಸಹಿಪ ಬಲವಿರದೆ
ಆನೆಗಳ ಕಟ್ಟಿರುವ ಅಂಕೋಲತರುಗಳೊಡನೆರಗಿದರು ಭರದೆ.

೭೦

ಅಶ್ವರತ್ನಂಗಳುಮನಮಳಧನಕನಕಮುಮನವರಿತ್ತರೊಲಿದು
ರಘುನೃಪನನೈಶ್ವರ್ಯ ಸಾರ್ದೊಡಮಹಂಕಾರ ತಾಂ ದೂರಮಿಹುದು.

೭೧

ಗೌರಿಯಯ್ಯನ ಗಿರಿಯನೇರಿದನು ರಘುವರನು ತುರಗದಳವಿರಲು
ಉದ್ಧೂತ ಧಾತುರಜದಿಂದದರ ಶಿಖರವನು ಬೆಳಸಿದಪನೆನಲು.

೭೨

ಗುಹೆಗಳಲಿ ಮಲಗಿರುವ ಸಮಸತ್ವಸಿಂಹಗಳು ಸೇನೆಯಬ್ಬರಕೆ
ಬೆದರದಿಹವೆನ್ನುವೊಲು ನೋಡಿದವು ಕತ್ತುಗಳನಿನಿಸೋರೆಗೈದು.

೭೩

ಭೂರ್ಜದೊಳು ಮರ್ಮರಧ್ವನಿಗೈದು ಬಿದಿರಿನೊಳು ಕೊಳಲುಲಿಯನಾಂತು
ಸುರನದಿಯ ಸೀರ್ಪನಿಯ ತಣ್ಪುವೆರೆದೆಲರವನನೋಲೈಸಿತಂತು.

೭೪

ಕತ್ತುರಿಯ ಮಿಗಗಳು ನಮೇರುತರುಛಾಯೆಯೊಳು ಕುಳಿತಿದ್ದ ಕತದೆ
ಕಂಪಿಡುವ ಬಂಡೆಯೊಳು ಬಳಲಿಕೆಯ ನೀಗಿದುದು ರಘುಸೇನೆ ಮುದದೆ.

೭೫

ಸರಳತರುಗಳಿಗೆಳೆದು ಬಿಗಿದಾನೆಗಳ ಕೊರಳ ಸರಪಣಿಯೊಳಿಸೆದು
ಪೊಳೆಯುವೋಷಧಿಗಳಿರುಳೆಣ್ಣೆಯಿರದುರಿವ ಸೊಡರಾಗಿರ್ದವಂದು.

೭೬

ಕೊರಳ ಹಗ್ಗಗಳಿಂದ ಸಿಗುರೆದ್ದುದನು ಕಂಡು ದೇವದಾರುತರು
ಬೀಡುಬಿಟ್ಟೆಡಗಳಲಿ ಕಟ್ಟಿದಾನೆಯ ಮೈಯ ಬೇಡರರಿದಪರು.

೭೭

ರಘುಪರ್ವತೀಯರೊಳು ಘೋರಸಂಗ್ರಾಮವೊಂದೊದಗಿರ್ದುದಲ್ಲಿ
ಕಣೆ ಕಲ್ಲು ಭಿಂಡಿವಾಳಗಳಿಂದೆ ಪುಟ್ಟಿ ಕಿಡಿ ಕಿರ್ಚಿ[illegible]ದಲ್ಲಿ.

೭೮

ಶರಗಳಿಂದುತ್ಸವಾಖ್ಯರನು ವಿಗತೋತ್ಸವಾಂಕಿತರೆನಿಸಿಗೈದು
ಭುಜವಿಜಯಗಾನವನು ಕಿನ್ನರರ ಮುಖದಿಂದೆ ಹಾಡಿಸಿದನಂದು.

೭೯

ಕಾಣಿಕೆಯ ಪಿಡಿಯಲೊಡನಿರ್ವರುಂ ಅರಿತರಂದೊಬ್ಬರೊಬ್ಬರನು
ಹಿಮಗಿರಿಯ ಸಾರವನು ರಘುರಾಜನವನಿಪನ ಸತ್ವವನು ಹಿಮನು.

೮೦

ಅಕ್ಷೋಭ್ಯವೆನಲಿರುವ ನಿಜಯಶೋರಾಶಿಯನು ಹಿಮಗಿರಿಯೊಳಿರಿಸಿ
ಪೌಲಸ್ತ್ಯನಲುಗಿಸಿರ್ದದ್ರಿಯನು ನಾಣ್ಚಿಸುವೊಲವನಿಳಿದನಂದು.

೮೧

ಪ್ರಾಗ್ಜ್ಯೋತಿಷೇಶ್ವರನು ಲೌಹಿತ್ಯವನು ದಾಂಟಿ ರಘು ಬಂದನೆಂದು
ನಡುಗಿದನು ಆನೆಗಳ ಬಿಗಿದ ಕೃಷ್ಣಾಗರುದ್ರುಮಗಳೊಡನಂದು.

೮೨

ರಥವರ್ತ್ಮರಜವೆದ್ದು ಮಳೆಗರೆಯುವಭ್ರದೊಲು ನೇಸರನು ಕವಿಯೆ
ಅದನೆ ತಾಂ ತಾಳದಿರುವಾ ನೃಪನು ತಾಳುವನೆ ಸೇನೆ ಮುಂಬರಿಯೆ.

೮೩

ಕಾಮರೂಪೇಶ್ವರನು ಆನೆಗಳಿನನ್ಯರನು ಗೆದ್ದವನು ಅಂದು
ಜಿತಸುರಪವಿಕ್ರಮನಿಗೊಲಿದು ಮದಗಜಗಳನೆ ತಂದಿತ್ತನೊಲಿದು.

೮೪

ಕಾಮರೂಪೇಶ್ವರನು ಹೇಮಮಯ ಪೀಠಾಧಿದೇವತೆಯ ಮಣಿದು
ತಚ್ಚರಣಕಾಂತಿಯನು ರತ್ನಪುಷ್ಪಂಗಳಿಂದರ್ಚಿಸಿದನೊಲಿದು.

೮೫

ದಿಕ್ಕುಗಳ ಗೆಲಿದಿಂತು ಛತ್ರಶೂನ್ಯಾವನಿಪ ಮೌಳಿಯೊಳಗಂದು
ಸ್ಯಂದನೋದ್ಧೂತರಜವಿರಿಸಿ ರಘು ನಿಜನಗರಿಗೈತಂದನೊಲಿದು.

೮೬

ಸರ್ವಮುಂ ದಕ್ಷಿಣೆಗೆ ಸಲುವಂಥ ವಿಶ್ವಜಿನ್ಮಖಗೈದನವನು
ಮರಳಿ ಕೊಡಲೆಂದಿರುವ ಸಜ್ಜನರ ಗಳಿಕೆ ದಲ್ ಮೋಡಗಳ ತೆರನು.

೮೭

ಸಚಿವ ಸಹಾಯನು ಸತ್ರಾಂತದೊಳಾ ಕಾಕುತ್ಸ್ಥನು ಒಲಿದು
ದೊರೆಗಳ ಸೋಲಿನ ಅಳಲನು ಘನತರ ಸತ್ಕ್ರಿಯೆಗಳಿನಳಿದು
ಇನಿಯರ ವಿರಹದೊಳರಸಿಯರಳಲನು ತಾಳುವರೆಂದರಿದು
ಮರಳಲು ನಿಜಪುರಿಗರಸರಿಗೊಪ್ಪಿಗೆಯಿತ್ತನು ತಾನಂದು.

೮೮

ಛತ್ರಧ್ವಜಕಲಶಾಂಕಿತದಡಿಯನು ನೃಪನ ಹಸಾದದೆ ಮೊರೆವುದನು
ಬೀಳ್ಕೊಡುವಂದಿನ ಭಕ್ತಿಪುರಸ್ಸರನಮನಗಳಿಂದಾ ನೃಪಸುತರು
ಮಗುಡದ ಸರದಿಂದುದುರಿದ ಸುಮದ ಮರಂದದ ಕಣಕಾಂತಿಯೊಳಂದು
ಆ ಸಮ್ರಾಟನ ಚರಣದ್ವಯದಂಗುಳಿಯನು ಬೆಳ್ಳನೆ ಬೆಳಗಿದರು.

## ಐದನೆಯ ಸರ್ಗ

# ಅಜಸ್ವಯಂವರಾಭಿಗಮನ

೧

ವಿಶ್ವಜಿದ್ಯಜ್ಞದೊಳು ತನ್ನಖಿಳಕೋಶವನು
ನಿಶ್ಶೇಷಮೆನಲಿತ್ತ ಭೂಪತಿಯನು
ಗುರುದಕ್ಷಿಣಾರ್ಥಮೆನಲ್ಯೆದಿದನು ವಿದ್ಯೆಯನು
ಕಲಿತ ವರತಂತು ಶಿಷ್ಯನು ಕೌತ್ಸನು.

೨

ಹೊನ್ನನೆರೆದಿತ್ತುದರಿನಳವಡಿಸುತರ್ಘ್ಯವನು
ಮೃಣ್ಮಯದ ಪಾತ್ರೆಯೊಳು ಅತಿಥಿರತನು
ಕೀರ್ತಿಪ್ರಕಾಶಿತನು ಶಾಸ್ತ್ರಪ್ರಕಾಶನನು
ಕರೆತಂದನತಿಥಿಯನನರ್ಘ್ಯಗುಣನು.

೩

ಆಸನಾಸೀನನಾದಾ ತಪೋವಿತ್ತನನು
ವಿಧ್ಯುಕ್ತರೀತಿಯೊಳು ಪೂಜಿಸಿದನು
ಮಾನಧನರಗ್ರಣಿ ವಿಧಿಜ್ಞನು ನರೇಶ್ವರನು
ಕೈಮುಗಿದು ಕೃತ್ಯವಿದನಿಂತೆಂದನು.

೪

ರವಿಯಿಂದಲೀ ಜಗಂ ಚೇತನವ ಪಡೆಯುವೊಲು
ಆರಿಂದ ಕಲಿತಿಹೆಯೊ ಎಲ್ಲ ಕಲೆಯ
ಮಂತ್ರಕೃತ್ ಋಷಿಜನರೊಳಗ್ರಣಿಯೆನಿಪ್ಪ ಆ
ನಿನ್ನ ಗುರು ಕುಶಲಿಯೆ ಕುಶಾಗ್ರಬುದ್ಧಿ !

೫

ವಾಙ್ಮನಃಕಾಯಂಗಳಿಂದಲಾ ವರತಂತು
ವಾಸವನುಮೆದೆಗೆಡುವನೆನುವೊಲಂತು
ಹಲವುಸಲ ಗಳಿಸಿರುವ ಮೂಬಗೆಯ ತಪಕಂತ-
ರಾಯಂಗಳಿಂದಲಳಿವಿಲ್ಲವಲ್ತೆ !

೬

ಪಾತೆಗಳ ರಚಿಸುವುದೆ ಮೊದಲಾದ ಯತ್ನದೊಳು
ಮಕ್ಕಳವೊಲಾರೈದು ಬೆಳೆಯಿಸಿರುವ
ಶ್ರಮವ ಪರಿಹರಿಸುತಿರುವಾಶ್ರಮದ ತರುಗಳವು
ಮರುತಾದಿ ಬಾಧೆಗಳಿನಳಿಯವಲ್ತೆ !

೭

ಹೋಮಕಾರ್ಯಕೆ ತಂದ ದರ್ಭೆಯಾದೊಡಮುಗಿದು
ಮುನಿಜನಗಳಲ್ಲಿಯಲಿ ಮರಿ ಮೇವುದೆ !
ತೊಡೆವಾಸಿನೊಳು ಹೊಕ್ಕುಳಿಳಿವಳ್ಳಿ ಜಗುಳುತಿರು
ವೆರಳೆವರಿ ನಿರಪಾಯದಿಂದೊಗೆವುದೆ !

೮

ನಿಯಮಾಭಿಷೇಕ ತಾನಾವುದರಿನಾಗುವುದೊ
ಪಿತೃತರ್ಪಣಕ್ಕಾವ ಜಲದೊರೆವುದೊ
ಉಂಭಷಷ್ಠಾಂಕಿತದ ಪುಳಿನ ತಾನೆಲ್ಲಿಹುದೊ
ಆ ತೀರ್ಥತೋಯವದು ಶುಭದಿನಿಹುದೊ ?

೯

ವೇಳೆಯೊಳು ಬಂದತಿಥಿಜನರ ಸತ್ಕಾರವನು
ಮೇಣೀ ಶರೀರದುರು ಪ್ರೋಷಣೆಯನು
ನಿರ್ವಹಿಸಲಿರುವಂಥ ವನ್ಯತೃಣಧಾನ್ಯವನು
ನಾಡಾಡಿ ತೊಂಡುದನ ಮೇಯದಿಹುದೆ !

೧೦

ಆ ಮಹರ್ಷಿಗಳೊಲಿದು ಕಲಿಸಿ ನಿನಗೆಲ್ಲವನು
ಗೃಹಿಯಾಗಲನುಮತಿಯನಿತ್ತರೇನು !
ಭಾವಿಸೆ ಸಕಾಲವಿದು ಸರ್ವೋಪಕಾರಾರ್ಹ
ದೀ ದ್ವಿತೀಯಾಶ್ರಮವ ತಳೆಯೆ ನೀನು !

೧೧

ನೀಂ ಬಂದಮಾತ್ರದಿಂದೆನ್ನಮನ ತೃಪ್ತಿಯನು
ತಾಳದೆಯೆ ಆಣತಿಯ ಪಾರುತಿಹುದು
ಗೌರವಿಸಿ ಬಾರೆಂದು ಮುನಿ ನಿನ್ನ ಕಳುಹಿದನೊ
ನೀನೆ ಮೇಣ್ ಬಂದಿಹೆಯೊ ಅಡವಿಯಿಂದೆ?

೧೨

ಅರ್ಘ್ಯಪಾತ್ರೆಯಿನರಿತು ಧನ ಬೀಯವಾದುದನು
ರಘುವರನುದಾರೋಕ್ತಿಗೆಂದು ತಾನು
ತನ್ನಿಷ್ಟಸಿದ್ಧಿಯೊಳು ದುರ್ಬಲಮನೋರಥನು
ವರತಂತುಶಿಷ್ಯನಿರದಿಂತೊರೆದನು.

೧೩

ನೀನೊಡೆಯನಾದಂದು ದುಗುಡವೆಮಗೆತ್ತಣದು
ಕ್ಷೇಮದಿಂದಿಹೆವು ನಾವೆಲ್ಲರಿಂದು
ರವಿ ಬೆಳಗುತಿರುವಂದು ಕತ್ತಲೆಯ ಮೊತ್ತವದು
ಜನರ ಕಣ್ಗಳನೆಂತು ಮುಸುಕಲಹುದು ?

೧೪

ತೋರ್ಪುದು ಕುಲೋಚಿತವು ಭಕ್ತಿಯನು ಪೂಜ್ಯರೊಳು
ಹಿರಿಯರನು ಮೀರಿರುವೆ ನೀನಿದರೊಳು
ಕಾಲಮಿಂಚಿರಲಿಂದು ನಿನ್ನ ಬಳಿಗೈತಂದು
ಬೇಡಿದಪೆನೆಂದಾನು ದುಃಖಿಸುವೆನು.

೧೫

ನೀನಂದು ಸಜ್ಜನರಿಗೈಸಿರಿಯನೆರೆದೆರೆದು
ದೇಹಮಾತ್ರದೊಳಿಂತು ತೋರುವಂದು
ವನವಾಸಿಗಳಿಗಖಿಳ ಫಲವಿತ್ತು ತಾನೊಂದು
ಕಾಂಡದಿಂದುಳಿದ ನೀವಾರವೆಂದು.

೧೬

ಸಾರ್ವಭೌಮನು ನೀನು ಮಖಜದಾರಿದ್ರ್ಯವನು
ಪಡೆದಿಂತು ಶೋಭಿಸುವುದೊಳಿತಪ್ಪುದು
ಪರಿವಿಡಿಯಿನಮರಗಣ ಕುಡಿದುದರಿನಾದಮೃತ
ಸಂಕ್ಷಯಮೆ ವೃದ್ಧಿಯಿಂ ಶ್ಲಾಘ್ಯಮಹುದು.

೧೭

ಅಂತದರಿನನ್ನೆವರ ಪೆರತೆಸಕಮಿರದವನು
ಗುರ್ವರ್ಥಕನ್ಯರನು ಬೇಡಿದಪೆನು
ಒಳಿತಕ್ಕೆ ನಿನಗಿಂದು ಚಾತಕಮುಮೆರೆದಪುದೆ
ನೀರಿರದ ಶಾರದಾಂಬುದವ ಬರಿದೆ !

೧೮

ಇಂತೆಂದು ತೆರಳಲುದ್ಯುಕ್ತನಾದಾತನನು
ವರತಂತು ಶಿಷ್ಯನನು ತಡೆದು ನೃಪನು
ನೀಂ ಗುರುವಿಗೀವುದಿನ್ನಾವುದೇನೆನುವುದನು
ಪೇಳೆಂದು ನೀನೆಂದು ಬೆಸಗೊಂಡನು.

೧೯

ವಿಧ್ಯುಕ್ತರೀತಿಯಿಂದಧ್ವರವ ಗೈದನನು
ಪೂಜ್ಯನನು ಮಮಕಾರವರ್ಜಿತನನು
ಕುರಿತಿಂತು ಪ್ರಸ್ತುತವನೊರೆದನು ವಿಚಕ್ಷಣನು
ಸಕಲ ವರ್ಣಾಶ್ರಮನಿಯಾಮಕನನು.

೨೦

ವಿದ್ಯೆಯನು ಕಲಿತಂದು ಬೇಡಿದೆನು ಪೇಳೆಂದು
ನಿನಗೆ ಗುರುದಕ್ಷಿಣೆಯನೆಂತೀವುದೆಂದು
ಚಿರಕಾಲ ನೀಂಗೈದ ಶುಶ್ರೂಷೆ ಸಾಕೆಂದು
ವರತಂತು ಮೊದಲದನೆ ಗಣಿಸಿರ್ದನು.

೨೧

ನಿರ್ಬಂಧದಿಂದೊಗೆದ ರೋಷದಿಂದಾಡಿದನು
ಕೊಂಡುಬಾ ನಾಲ್ಕು ಮೇಣ್ ಹತ್ತುಕೋಟಿ
ನನ್ನೊಂದು ಬಡತನವನೆಣಿಸದೆಯೆ ಬೇಡಿದನು
ವಿದ್ಯೆಗಳ ಪರಿಸಂಖ್ಯೆಗೆಂದು ಸಾಟಿ.

೨೨

ನೀನಿಂದು ಪ್ರಭುಶಬ್ದಶೇಷನೆಂದಿಂತಾನು
ನಿನ್ನರ್ಘ್ಯಪಾತ್ರೆಯಿಂದರಿತಿರುವೆನು
ಶ್ರುತವಮೌಲ್ಯದಪ್ಪೇತರತ್ವದಿಂದಾನಾನು
ನಿನ್ನನುಪಟಳಗೊಳಿಸಲೊಪ್ಪದಿಹೆನು.

೨೩

ದ್ವಿಜರಾಜತೇಸನು ಜಗದೇಕನಾಯಕನು
ದುರಿತದೂರೇಂದ್ರಿಯವ್ಯಾಪಾರನು
ವೇದವಿದ್ವರವರ್ಣಿಯಿಂದಲಾವೇದಿತನು
ಕೌತ್ಸನನು ಮತ್ತಿಂತು ನುಡಿಯಿಸಿದನು.

೨೪

ರಘುವಿನಿಂದಿಷ್ಟಾರ್ಥವನು ಪಡೆಯದೈದಿದನು
ಗುರ್ವರ್ಥವನ್ನರಿದ ವೇದವಿದನು
ಪೆರತೊರ್ವದಾತೃವನು ಕುರಿತು ತೆರಳಿದನವನು
ಎನುವ ಪೊಸಪಳಿಯೊಂದ ನಾನೊಲ್ಲೆನು.

೨೫

ನಿನ್ನೊಂದು ಕೋರಿಕೆಯನೀಡೇರಿಪನ್ನೆವರ
ಮರ್ಹತನೆ ನಾಲ್ಕನೆಯ ಅಗ್ನಿವೋಲು
ಪೂತನುತಮಾದೆನ್ನ ತ್ರೇತಾಗ್ನಿಶಾಲೆಯೊಳು
ನೀನಿರಯ್ ಕೌತ್ಸ ದಿನವೆರಡುಮೂರು.

೨೬

ಆ ಅಗ್ರಜನ್ಮನಂದಂತಾಗಲೆಂದೊರೆದು
ತರಿಸಂದ ಸಂಗರವನೊಪ್ಪಿರ್ದನು
ಧರೆಯ ಧನವೆಲ್ಲವನು ಕೊಂಡುದರಿನರ್ಥವನು
ರಘು ಧನಪನಿಂದೆಳೆಯಲೆಳಸಿರ್ದನು.

೨೭

ವಾಸಿಷ್ಠಮಂತ್ರದುಕ್ಷಣಜಪ್ರಭಾವದೊಳು
ಜಲಧಿಯೊಳು ನಭದೊಳು ಮಹೀಧರದೊಳು
ತದ್ರಥಂ ಆ ಮರುತ್‌ಸಖವಲಾಹಕನವೊಲು
ಚರಿಸಿದಪುದೆಡರಿಲ್ಲದಂತೆವೋಲು.

೨೮

ಆ ಬಳಿಕ ಬೈಗಿನೊಳು ವೀರನು ವಿನಿರ್ಮಲನು
ಸಾಮಂತದೊರೆಯಂತೆ ಹರಸಖನನು
ಪರಿಗಣಿಸಿ ಜಯಿಸಲೆಂದಾಂತನು ವರೂಥವನು
ರಘುವರನು ಶಸ್ತ್ರಾಸ್ತ್ರಸಜ್ಜಿತವನು.

೨೯

ಬೆಳಗಿನೊಳು ಪಯಣಕಣಿಗೈಯಲಿರುವರಸನನು
ಬೊಕ್ಕಸದ ಮನೆಯವರು ಬಂದು ಕಂಡು
ಹೊನ್ನಮಳೆ ನಡುಮನೆಯೊಳಾಗಸದಿನಾದುದನು
ಪೇಳಿದರು ತಾವಂತೆ ಬೆರಗುಗೊಂಡು.

೩೦

ಥಾಳಿಯಿಟ್ಟೆದುರಿಸುವ ಮುನ್ನಮೆ ಧನಾಧಿಪನು
ಸುರಿಯಿಸಿದ ಹೊನ್ನನು ಧರಾಧೀಶನು
ಆ ವಜ್ರಖಂಡಿತಸುಮೇರುಪಾದದೊಲಿರುವ
ರಾಶಿಯನು ಕೌತ್ಸಗಂದಿತ್ತನವನು.

೩೧

ಗುರ್ವರ್ಥಕಧಿಕವನು ಬಯಸದಿಹ ಯಾಚಕನು
ಅರ್ಥಿಕಾಮಾಧಿಕವನೀವ ನೃಪನು
ಸಾಕೇತವಾಸಿಜನರಾ ಇರ್ವರನುಮಂದು
ಪೊಗಳಿದರು ಅಭಿನಂದನೀಯರೆಂದು.

೩೨

ನೂರಾರು ಒಂಟೆಗಳು ಮೇಣ್ ಹೆಣ್ಣು ಕುದುರೆಗಳು
ಹೊನ್ನುಗಳ ಹೊರೆಹೊತ್ತು ಸಾಗುವಂದು
ತಲೆವಾಗಿ ನಿಂದಿರುವ ಜನಪನನು ನುಡಿಸಿದನು
ಕೈಯಿಂದೆ ಮೈದಡುವುತಾ ಕೌತ್ಸನು.

೩೩

ಸದ್ವೃತ್ತದೊಳಗರಸು ನೆಲಸಿದಂದಿಳೆ ತಾನು
ಕಾಮಿತವನೀಯುವುದು ಚೋದ್ಯವೇನು !
ಸ್ವರ್ಗವೂ ನಿನಗಿಂದು ಸುರಿದುದಿಷ್ಟಾರ್ಥವನು
ತವಮಹಿಮೆ ಊಹೆಗುಮತೀತಮಹುದು.

೩೪

ಸರ್ವಶುಭಫಲಗಳನು ಪಡೆದ ನಿನಗೇನರಕೆ
ಪುನರುಕ್ತವೆನಿಸೀತು ಬೇರೆ ಹರಕೆ
ಸುಗುಣಿ ನಿನ್ನನು ನಿನ್ನ ಜನಕ ಪಡೆದಂದದೊಳು
ಪಡೆ ಮಗನನಾತ್ಮಾನುಗುಣನ ನೀನು.

೩೫

ಹರಸುತಂದಿಂತೆಂದು ರಘುಮಹಾರಾಜನನು
ಗುರುವಿನೆಡೆಗೈತಂದನಾ ವಿಪ್ರನು
ಜೀವಕುಲವಿನನಿಂದಲಾನುವೊಲು ತೇಜವನು
ಸುತಲಾಭಹರ್ಷಿತನು ನೃಪನಾದನು.

೩೬

ಬ್ರಾಹ್ಮೀಮುಹೂರ್ತದೊಳು ಹೆತ್ತಳಂದಾದೇವಿ
ಆ ಕುಮಾರೋಪಮಕುಮಾರಕನನು
ಅದರಿಂದಲಾ ಪಿತನು ಬ್ರಹ್ಮನಾಮವನೋವಿ
ಆತ್ಮಜನ್ಮನನು ತಾನಜನೆಂದನು.

೩೭

ಓಜಸ್ವಿರೂಪಮದೆ ವೀರ್ಯಮುಂ ಆತನದೆ
ಅದುವೆ ನೈಸರ್ಗಿಕಮಹೋನ್ನತತ್ವಂ
ಹೆಜ್ಜೊಡರ ಬಳಿಹಿಡಿದು ಹೊತ್ತಿಸಿದ ದೀಪದೊಲು
ಸುತನಿರ್ದನಯ್ಯನಿನಭಿನ್ನನೆನಲು.

೩೮

ಕ್ರಮವಾಗಿ ವಿದ್ಯೆಯನು ಗುರುಮುಖದೆ ಗಳಿಸಿದನು
ಹರೆಯದೊಳು ಹೊಸಹೊಗರನಾಂತೆಸೆದನು
ಬಯಸಿಯುಂ ರಾಜ್ಯರಮೆಯಾತನನು ಧೀರೆಯೊಲು
ಗುರುವಿನೊಂದಾಜ್ಞೆಯನಪೇಕ್ಷಿಸಿದಳು.

೩೯

ಅಜಕುಮಾರನನು ಬರಮಾಡಿಕೊಳಲಾತುರನು
ಕೃಥಕೈಶಿಕೇಶ್ವರನು ಭೋಜನೃಪನು
ಇಂದುಮತಿಸೋದರಿಯ ಆ ಸ್ವಯಂವರಕವನು
ತನ್ನಾಪ್ತದೂತನನು ಕಳುಹಿಸಿದನು.

೪೦

ಭೋಜನೊಳು ರಘು ನೆನೆದು ಶ್ಲಾಘ್ಯಸಂಬಂಧವನು
ಸುತನವುದ್ವಾಹಾರ್ಹದಶನು ಎಂದು
ಸೇನಾಸಮೇತನಾದೀತನನು ಕಳುಹಿದನು
ಸಂಪತ್ಸಮೃದ್ಧಿಯ ವಿದರ್ಭಪುರಿಗೆ.

೪೧

ಡೇರೆ ಮೊದಲಾದುವನು ರಚಿಸುತುಪಚರಿಸಿದರು
ನಜರು ಮೊದಲಾದುವನು ಜನರಿತ್ತರು
ಅರಸುಮಗನಾದಾರಿ ಬಯಲುಸೀಮೆಯೊಳಿಂತು
ಉಪವನ ವಿಹಾರನಿಭವೆನಲಾಯಿತು.

೪೨

ತಣ್ಣನೆಯ ಸೀರ್ಪನಿಯ ನರ್ಮದೆಯ ದಡದೆಡೆಯ
ಗಾಳಿ ಚಲಿಯಿಸುತಿರುವ ಬಿಲ್ವನಿಚಯ
ಕಣ್ಗೊಪ್ಪಲದರ ಬಳಿ ಹುಡಿಕೊಳೆಯ ಬಾವುಟದ
ಬಳಲಿರುವ ಸೇನೆಯನು ತಂಗಿಸಿದನು.

೪೩

ನೀರಿನೊಳು ತಾನಿಳಿದ ತಾಣವನು ಸೂಚಿಸುತ
ದುಂಬಿಗಳು ಮೇಲುಗಡೆ ಸುತ್ತ ಮೊರೆಯೆ
ತೊಳೆದ ದಾನಾಮಲದ ಗಂಡ ಭಿತ್ತಿಯ ತಳೆದು
ಕಾಡಾನೆಯೊಂದಲ್ಲಿ ಮುಳುಗೆದ್ದಿತು.

೪೪

ಮೇಲ್ಮೊಗದ ಕರಿಗೆರೆಯ ಬಣ್ಣವೆಸೆಯುತ್ತಿರುವ,
ಶಿಲೆ ತಗುಲಿ ಮೊಂಡಾದ ಗಜದಂತವು;
ಋಕ್ಷವದ್ಗಿರಿಸಾನು ಕೇಳಿಯನು ಸೂಚಿಪುದು
ಗಿರಿಧಾತು ನೀರಿನಿಂದಳಿಸಿದ್ದರು.

೪೫

ಸೊಂಡಿಲನು ವೇಗದಿಂದೊಳಗೆಳೆದು ಹೊರಚಾಚಿ
ಘೀಳಿಡುತೆ ಪೆರ್ದೆರೆಯನಪ್ಪಳಿಸುತೆ
ತೀರಾಭಿಮುಖಿಯಾದ ವನ್ಯಕರಿ ಮೆರೆದಪುದು
ಗಜಶಾಲೆಯಗುಳಿಯನು ಮುರಿಯುವಂತೆ.

೪೬

ಹಾವಸೆಯ ಮಂಜರಿಯ ಜಾಲ ಮುಚ್ಚಿದ ಮೈಯ
ಗಿರಿಯಂಥ ಹೇರಾನೆ ದಡಕ್ಕೈದಿತು
ಅಲ್ಲೋಲ ಕಲ್ಲೋಲಮಾದಾಮಹಾಪೂರ
ಆ ಬಳಿಕ ದಡಕೆ ಬಂದಪ್ಪಳಿಸಿತು.

೪೭

ನೀರಿನೊಳಗದ್ದಿದೊಂದರೆ ಚಣದೊಳಾರಿದೊಲು
ತೋರ್ದ ಮದದುರ್ದಿನ ಶ್ರೀಯುಮುಂದು
ಊರಾನೆಗಳ ಕಂಡು ಮೇರೆವರಿದುಕ್ಕಿದುದು
ಆ ಒಂಟಿಸಲಗದ ಕಪೋಲತಲದೆ.

೪೮

ಏಳಿಲೆಯ ಬಾಳೆಗೆಳ ಸೊವಡಿನೊಂದೇಳಿಗೆಯ
ದುಸ್ಸಹದ ಮದಜಲವನಾಘ್ರಾಣಿಸಿ
ಮೇಲಣಾಧೋರಣರ ಯತ್ನಗಳಿಗಂಜದೆಯೆ
ಆ ಸೇನೆಯಾನೆಗಳು ವೊಗಮುರಿದವು.

೪೯

ಉರುಳಿದವು ಕಂಬಗಳು ಓಡಿದವು ಕುದುರೆಗಳು
ಮುರಿವಡೆಯಲಚ್ಚುಗಳು ರಥ ಬಿದ್ದವು
ಬೆದರಿದರು ರಾಮೆಯರು ಬೆದರಿದರು ಸೈನಿಕರು
ನಿಮಿಷದೊಳು ಪಡಲಿಟ್ಟಿತಜಶಿಬಿರವು.

೫೦

ತಗದು ಕಾಡಾನೆಯನು ಕೊಲುವುದರಸಂಗೆಂದು
ತನ್ನೆದುರು ಬರುತಿರುವ ಮದಗಜವನು
ಮರಳಿಸುವೆನೆಂದಜನು ಮೊನೆಮುರಿದ ಕಣೆ ತೆಗೆದು
ನಸು ಎಳೆದು ಶ್ರುತವಾನನದನೆಚ್ಚನು.

೫೧

ಇಸಲೊಡನೆ ಕಾಡಾನೆ ನಾಗರೂಪವನುಳಿದು
ನಡೆ ನೋಡೆ ಸೈನಿಕರು ಬೆರಗುವಡೆದು
ಹೊಳೆಹೊಳೆವ ಕಾಂತಿಮಯದೆಡೆಯ ರಮಣೀಯತೆಯ.
ವ್ಯೋಮಚರರೂಪವನು ಪಡೆದುದಂದು.

೫೨

ತನ್ನ ಮಹಿಮಾಬಳದೊಳಾಬಳಿಕ ಖೇಚರನು
ಸುರಕುಜದ ಹೂತರಿಸಿ ಅಜನಿಗೆರೆದು
ಎದೆಯ ಮುತ್ತಿನಹಾರ ಸುಲಿಪಲ್ಲ ಬೆಳಕಿನೊಳು
ಹೊಳೆಯುತಿರಲಾ ವಾಗ್ಮಿಯಿಂತೆಂದನು.

೫೩

ಹಮ್ಮುವಡೆದೆನ್ನನು ಮತಂಗಋಷಿ ಶಪಿಸಿದನು
ಪಡೆದೆನು ಮತಂಗಜಶರೀರವಿದನು
ಪ್ರಿಯದರ್ಶನಾಖ್ಯಗಂಧರ್ವಪತಿ ನಂದನನು
ನಾಂ ಪ್ರಿಯಂವದನೆಂದು ತಿಳಿಯೆನ್ನನು.

೫೪

ಆ ಬಳಿಕ ಅಡಿಗೆರಗಿ ಬೇಡುತಿರಲಾತನನು
ಕಡೆಗೆ ಮುನಿ ಶಾಂತಿಯನು ತಳೆದನವನು
ಬೆಂಕಿಯುರಿ ತಗುಲಿದರೆ ನೀರು ಬಿಸಿಯಾಗುವುದು.
ತಣ್ಪುದಕೆ ಸಹಜಗುಣವಲ್ಲವೇನು !

೫೫

ನಿನ್ನ ಕುಂಭಸ್ಥಲವನಿಕ್ಷ್ವಾಕುವಂಶಜನು
ಎಂದಜನು ಶರಮುಖದೆ ಭೇದಿಸುವನು
ಅಂದು ನೀನೀನಿನ್ನ ಮನ್ನಣೆಯ ದೇಹವನು
ತಳೆವೆಯೆಂದೊರೆದನು ತಪೋವಿತ್ತನು.

೫೬

ಧೀರ ನಿನ್ನನು ನೆನೆದು ಚಿರಕಾಲ ಹಾರಿದೆನು
ಬಂದು ಶಾಪವನಿಂದು ಕಳೆದೆ ನೀನು
ನನ್ನ ಮುನ್ನಿನ ಪದವ ಪಡೆದುದಕೆ ಬೆಲೆಯೇನು
ಉಪಕಾರವೆಸಗದಿರೆ ಮರಳಿ ನಾನು.

೫೭

ಗಾಂಧರ್ವಸಮ್ಮೋಹನಾಸ್ತ್ರವಿದನೀಯುವೆನು
ಒರೆವೆ ತುಡುವಿಳಿಯಿಸುವ ಮಂತ್ರಗಳನು
ಶರವನಿದನೆಸೆವವನಿಗತಿಹಿಂಸೆಯಾಗದೊಲು
ಜಯವನಿತೆಯಪ್ಪುವಳು ಚಾಚಿ ತೋಳು.

೫೮

ಕೊಲಲೆಂದು ಮನದಂದೆನೆನುವ ಲಜ್ಜೆಯನುಳಿದು
ಹೊಡೆವಂದು ಕರುಣೆಯನೆ ತಳೆದೆ ನೀನು
ಪೆರತೊಂದನೆಣ್ಣದಿರು ಕಾಠಿಣ್ಯವೆಸಗದಿರು
ಪತಿಕರಿಸುತಸ್ತ್ರವನು ದಯವ ತೋರು.

೫೯

ನೃಪಸೋಮನಸ್ತ್ರವಿದನಂತಾಗಲೆಂದೊರೆದು
ಅಮಲಸೋಮೋದ್ಭವೆಯ ಜಲದೊಳಂದು
ಾಚಮನನಮುಂಗೈದು ಬಡಗುವೊಗದೊಳು ನಿಂದು
ಮಂತ್ರವನು ಖಚರನಿಂದಾಂತನೊಲಿದು.

೬೦

ಕೈವಯೋಗದೊಳಿಂತು ಸಖ್ಯಮನಚಿಂತ್ಯಮನು
ದಾರಿಯೊಳು ಪಡೆದಿರ್ವರೊಳಗೊರ್ವನು
ಕೈತ್ರರಥಕೈದಿದನು ಸೌರಾಜ್ಯಶೋಭೆಯನು
ಮಾಗಧವನೈದಿದನು ಪೆರತೋರ್ವನು.

೬೧

ನಗರೋಪಕಂಠದೊಳು ತಂಗಿದಜರಾಜನನು
ಆಗಮನಸಂಜನಿತಹರ್ಷಯುತನು
ಶಶಿಯ ಕಂಡುಬ್ಬುವಲೆಯಿಂದಬ್ಧಿ ಯೇಳುವೊಲು
ಕ್ರಥಕೈಶಿಕೇಶ್ವರನು ಇದಿರೆಳ್ದನು.

೬೨

ಆಳಿನೊಲು ಮುಂದೆನಡೆದಾ ಅಜಕುಮಾರನನು
ಪುರವೊಗಿಸಿ ಸಿರಿಯಿತ್ತು ಭೋಜನೃಪನು
ಅಜನೆ ಮನೆಯಜಮಾನ ಭೋಜನಾಗಂತುಕನು
ಎಂದೆಲ್ಲರರಿಯುವೊಲು ಸೇವಿಸಿದನು.

೬೩

ಹೊರಗಡೆಯ ಮೂಡಣದ ಬಾಗಿಲಿನೊಳಿರಿಸಿರುವ
ಪೂರ್ಣಕುಂಭಗಳಿಂದಲೆಸೆಯುತಿರುವ
ನವರಾಜಭವನದೆಡೆಗೊಯ್ದರು ರಘೂಜನನು
ಅಧಿಕಾರಿಪುರುಷರ್ಕಳೊಲಿದು ಮಣಿದು.

೬೪

ಶೈಶವಾನಂತರದ ಯೌವನಾವಸ್ಥೆಯೊಳು
ಮನ್ಮಥನು ದೇಹದೊಳು ನೆಲಸಿರ್ದನು.
ರಘುಮಹಾರಾಜನಿಭನಾದಜಕುಮಾರಕನು
ಆ ರಾಜಭವನದೊಳು ನೆಲಸಿರ್ದನು.

೬೫

ಬಲಿದ ಹೆಗಲೊಳು ಕಿವಿಯ ಕುಂಡಲವವುಕುತಿರುವಂದದೊಳು
ಮಲಗಿರುವಜನನು
ಹೊದಿದ ಹೊದಿಕೆಯನೆಳೆವ ಭರದೊಳು ಮೈಯಗಂಧದ ಲೇಪವಳಿ
ಸಿರುವಜನನು
ಸಮವಯಸ್ಕರುದಾರವಚನರು ವಂದಿಮಾಗಧರುಲಿಯುತುಪ್ಪಡವಾಡನು
ಉದಯಕಾಲದೊಳೆಚ್ಚರಿಸಿದರು ಅರಿವಿನತಿಶಯದಿಂದಲೊಪ್ಪುವ ನೃಪನನು.

೬೬

ಇರುಳುಸಂದುದು ಮತಿಮತಾಂವರ ಭರದೆ ಸೆಜ್ಜೆಯ ತೊರೆದು ನೀನಿರ
ದೇಳ್ವುದು
ಇಳೆಯ ಹೊರೆಯನು ಅಜನು ನಿಮ್ಮಿಬ್ಬರೊಳು ಸರಿಹಸುಗೆಯೊಳು ಪಾಲ್ಗೈ
ದಿತ್ತನು
ಅತ್ತಣೆಡೆಯೊಳದೊಂದು ಕಡೆಯೊಳು ನಿನ್ನ ಗುರುವದನಾಂತು ಮೆರೆದಿಹ
ನಾತನು
ಇತ್ತಲದರಿನ್ನೊಂದು ತುದಿಯನು ಹೊತ್ತು ಮೆರೆವುದಕಿದಿಗೊ ನೀನಿಂ
ದೇಳ್ವುದು.

೬೭

ಇರುಳು ನಿದ್ರಾವಶನು ನೀನಿರಲದನು ನೋಡುತಲಬಲೆ ಖಂಡಿತೆಯಂದದೆ
ಲಕ್ಷ್ಮಿ ಕಟ್ಟೆರಕವನು ನಿನ್ನೊಳು ತೋರುತಿರ್ದುಂ ಮುನಿದು ನೋಡದೆ
ನುಡಿಸದೆ
ಆವನೋರ್ವನನೈದಿ ಬಿನದಂಗೊಂಡಳಾ ವಿಧುವಾತನುಂ ಕಳೆಗುಂದುತೆ
ನಿನ್ನ ಮೊಗದೈಸಿರಿಯ ಬಿಡುತಿಹನತ್ತ ಪಡುವಣ ದಿಕ್ಕಿನಂತದೊಳಿಳಿಯುತೆ.

೬೮

ಸಿರಿಯಿನೆಸೆಯುವ ತರಳ ಪರುಷೇತರದ ತಾರಕೆವೆರೆದ ಕಣ್ಜೊತೆಯೊಂದಿದು
ಬವರಿದಿರುಗುವ ದುಂಬಿವರಿಯುದರದೊಳು ಮೆರೆಯುವ ಬಿರಿದ ತಾವರೆ
ಯೊಂದದು
ಇಂತು ತಾವೆರಡಿಂದು ಸಮಕಾಲದೊಳು ಹಿರಿಹಿರಿ ಹಿಗ್ಗುತರಳುತೆ ಬೀಗುತೆ
ಮತ್ತೆ ಓರೊಂದರೊಳು ಸರಿದೊರೆಯಂತೆ ಮೆರೆಯಲಿ ಸೊಬಗನೆಲ್ಲೆಡೆ
ಸೂಸುತೆ.

೬೯

ನಸುಕಿನೆಲರಿದೊ ನಿನ್ನ ಸುಯ್ಯೆಲರೊಂದು ಸಾಜದ ಕಂಪನೆಳಸುತೆ ಬೀಸುತೆ
ಪರರ ಗುಣಗಳ ನೆರವೊಳಾದೊಡಮದನು ಪಡೆದಪೆನೆಂದು ಆಶಿಸುತೊಯ್ಯನೆ
ಮರಗಳೊಳು ತೊಟ್ಟುಡಿದ ಹೂಗಳ ನರುದೊಡಂಬೆಯನಪ್ಪಿಕೊಳ್ಳುವುದು
ಸುಮ್ಮನೆ
ಅರುಣಕಿರಣಗಳಿಂದಲರಳಿದ ಸರಸಿಜಂಗಳನೆನೆದು ತಳ್ಕಿಪುದೊಯ್ಯನೆ.

೭೦

ಚೆಂದದಿಂದಿಹ ತರುಗಳೋಳಿಯ ಹೊಳೆವ ನಳನಳಿಪೆಳೆಯ ಚೆಂದಳಿರೆಡೆ
ಯೊಳು.
ಹೊಳೆದ ಮುತ್ತಿನ ಮಣಿಯ ತೆರದೊಳು ಬೆಳ್ಪನೆಸೆಯುವ ಹಿಮದ ಮಣಿ
ಗಣವಿಂತಿದು
ಅಜಕುಮಾರನೆ ಚೆಲುವು ಸೂಸುವ ನಿನ್ನ ನಳನಳಿಪೆಳೆಯ ಚೆಂದುಟಿ
ಯೆಡೆಯೊಳು.
ದಂತಕಾಂತಿಯನಾಂತು ಮೆರೆಯುವ ಮುಗುಳುನಗೆಯ ವಿಲಾಸದಂದದೊ
ಲೆಸುವುದು.

೭೧

ಮೂಡುದೆಸೆಯೊಳು ನೇಸರುದಯಿಸುತಾರ್ಪಿನಿಂದೈತರುವ ಮುನ್ನಮೆ
ನೋಡಿದೊ.
ಅರುಣನಡಿಯಿಟ್ಟಿದಿಗೊ ಕತ್ತಲೆ ಮೊತ್ತವೆಲ್ಲವನೋಡಿಸಿರುವನು ಬೇಗನೆ
ಅಂತೆ ದಲ್ ಹೇ ವೀರವರ ಕಟ್ಟುಗ್ರರಣದೊಳು ನುಗ್ಗಿ ಕೊಚ್ಚುವೆ ನೀನೆನೆ
ಗುರುವು ಭರದಿಂದೆದುರು ಬೀಳುತಲರಿಸಮೂಹವನೇನು ತಾನೆಯೆ ತರಿವನೆ

೭೨

ಕೊಡಹುತೆರಡುಂ ಪಕ್ಕಗಳನಿದೊ ಜಡವನುಳಿಯುತೆ ನಿದ್ದೆ ತಿಳಿದೆಚ್ಚತ್ತವು
ನಿನ್ನ ಸೇನೆಯ ಕರಿಗಳಿದಿಗೋ ಸಂಕಲೆಯ ಸರಪಳಿಯ ದನಿಗೈದೆದ್ದವು
ಎಳೆಯ ನೇಸರಿನರುಣಕಾಂತಿಯೊಳದ್ದಿದಿವುಗಳ ದಂತಕೋಶಗಳೆಸೆದಿವೆ
ಮದಿಸಿದಂದಾ ಗಿರಿಯ ಗೈರಿಕತಟವನೊಡೆದಂದೆಸೆಯುವಂದದೊಳೊಪ್ಪಿವೆ.

೭೩

ಸರಸಿಜಾಂಬಕ ನೋಡು ನೋಡೀ ದೀರ್ಘಪಟಮಂಡಲದೆ ಬಿಗಿವಡೆ
ದೆಸೆಯುವ
ಈವನಾಯುಜದಶ್ವನಿವಹವು ನಿದ್ದೆಗೊಡಹುತಲೆದ್ದು ಮುಂಗಡೆಯೊಪ್ಪುವ
ತಿನ್ನಲೊಟ್ಟಿದ ರಾಶಿಸೈಂಧವಶಕಲಸಂಕುಲಕಿದಿಗೊ ಬಾಯೊಡ್ಡಿರುವುವು
ಮತ್ತಮದನೀ ಬಾಯ ಉಸುರಿನ ಬಿಸಿಯ ಹಬೆಯೊಳು ಮಲಿನಗೊಳಿ
ಸುತಲಿರುವುವು.

೭೪

ಪೂಜೆಮಾಡಿರುವರಲಸರದೊಳು ಸಂದು ಸವನಿಸಿತಿನನ ಕಿರಣಕೆ ಬಾಡಲು
ಕಿರಣಕಾಂತಿಯನುಳಿದು ಮುಸುಕಾಗಿಹುದು ಹೊತ್ತಿಸಿದುರಿವ ಸೊಡರಿದು
ನೋಡಲು
ಸವಿಯ ತನ್ನುಲಿಯಿಂದೆ ನಿನ್ನೀ ಪಂಜರದಗಿಣಿಯಿದಿಗೊ ಆಲಾಪಿಸುತಿದೆ
ನಿನ್ನನೆಳ್ಚರಗೊಳಿಸಲೆಂದೊಲಿದಾವು ಹಾಡುವ ನುಡಿಯನೆಲ್ಲವ ಕೇಳುತೆ.

೭೫

ಎಂದು ಸವಿನುಡಿಯಿಂದೆ ಹಾಡುವ ವಂದಿಪುತ್ರರ ನುಡಿಯ ಕೇಳಿ ಕುಮಾರನು
ನಿದ್ದೆಯಿಂದೆಳ್ಚತ್ತು ನೋಡಿದನುಪ್ಪವಡಿಸಿದನುಳಿದು ಭರದೊಳು ಹಾಸನು
ಮಧುರ ಮದರವಂದಿದೆ ನಿನದಿಸುವಂಚೆವಿಂಡುಗಳುಲಿಯನಾಲಿಸಿ
ಭರದೊಳು.
ಮೆರೆವ ಗಂಗೆಯ ಮರಳುಹಾಸನು ಸುಪ್ರತೀಕವು ಉಳಿಯುತೇಳುವತೆರ
ದೊಳು.

೭೬

ಬಳಿಕ ಶಾಸ್ತ್ರದೊಳೊರೆದ ತೆರದೊಳು ಅಜನು ದಿನಮುಖದುಚಿತವಿಧಿಗಳ
ಸಲಿಸುತೆ
ಆ ಸ್ವಯಂವರಕುಚಿತವೆನಿಸುವ ಕುಶಲವಿರಚಿತವೇಷಭೂಷದೊಳೊಪ್ಪುತೆ
ವರಣಮುಂಟಪದತ್ತಲೈದಿರುವರಸುಕುವರರ ಬಳಗವೆಸೆದಿರುವೆಡೆಯನು
ಮೆರೆವ ಕಣ್ಣೆವೆದುರುಗಲೊಪ್ಪುವ ಚೆಲುವುನೋಟವ ನೋಡುತವನೆ ತಂದನು.

---

## ಆರನೆಯ ಸರ್ಗ

# ಸ್ವಯಂವರವರ್ಣನೆ

೧

ರಾಜೋಪಚಾರದಿಂದಣಿಗೈದ ಮಂಚದೊಳು
ವಿಸ್ತರದೊಳೋರಣದಿನೊಪ್ಪುವರನು
ಪುಷ್ಪಕದೊಳಿರುವಮರರಂದದಿಂದೆಸೆವರನು
ನರಲೋಕಪಾಲರನು ಕಂಡನಜನು.

೨

ರತಿಯ ಸನ್ನುತಿಗೊಲಿದನುಗ್ರಹಿಸಲೀಶ್ವರನು
ನಿಜತನುವ ಪಡೆದಿರುವ ಕಾಮನವೊಲು
ಕಾಕುತ್‌ಸ್ಥನೈತರಲು ಅರಸುಮಕ್ಕಳು ಮನದೊ
ಳಿಂದುಮತಿಯಾಶೆಯನು ತೊರೆದರಂದು.

೩

ಕ್ಲಪ್ತಸೋಪಾನಪಥದಿಂದಲಜನೇರಿದನು
ಭೋಜನೃಪನಿರ್ದಿಷ್ಟ ಮಂಚದೆಡೆಯ
ಶಿಲೆಗಳೊಳಗಡಿಯಿಡುತ ಮೃಗರಾಜಶಾಬಕನು
ಹತ್ತುವೋಲುತ್ತುಂಗ ಗಿರಿಯ ತುದಿಯ.

೪

ವರನೀಲಪೀತಾದಿ ವರ್ಣದಾಸ್ತರಣದೊಳು
ಹೊಳೆವ ಮಣಿಮಂಚದೊಳು ಮಂಡಿಸಿರಲು
ಆ ಮಯೂರದ ಮೇಲೆ ಕುಳಿತ ಷಣ್ಮುಖನೋಲು
ಎಸೆದನು ಕುಮಾರಕನು ಕಾಂತಿ ಮಿಗಲು.

೫

ಮೋಡಗಳ ಹಂತಿಯೊಳು ಹೊಳೆಹೊಳೆವ ಮಿಂಚಿನೊಲು
ಸಾವಿರದ ಲೆಕ್ಕದಲಿ ಹಸುಗೆಗೊಂಡು
ತೇಜೋವಿಶೇಷದಿಂದೀಕ್ಷಿಸುವೊಡರಿದೆನಲು
ಆ ರಾಜಪಂಕ್ತಿಯೊಳು ಲಕ್ಷ್ಮಿಯಿಹಳು.

೬

ಆ ಮಹಾರ್ಹಾಸನಾಸೀನರಾದರಸರೊಳು
ಚಾರುನೇಪಥ್ಯಧೃತಭೂಮಿಪರೊಳು
ಕಲ್ಪತರುಮಧ್ಯಗತಪಾರಿಜಾತದವೋಲು
ರಘುಸೂನು ಮಿರುಗಿದನು ಕಾಂತಿ ಮಿಗಲು.

೭

ಅರಸರೆಲ್ಲರನುಳಿದ ರಘುಸೂನುವೋರ್ವನೊಳು
ಪೌರಜನರಕ್ಷಿಕುಲ ಸೆರೆಯಾದುದು
ಮದಜಲವನುಣ್ಮಿಸುವ ವನಗಜಕಪೋಲದೊಳು
ಸುಮತರುವನುಳಿದೆರಗುವಳಿಯವೋಲು.

೮

ವಂದಿಜನರನ್ವಯವನರಿತವರು ಹೊಗಳಿದರು
ರಾಜರನು ಸೋಮಾರ್ಕಸಂಭವರನು
ಅಗುರುಸಾರದಿನೊಗೆದ ಧೂಪಧೂಮಸ್ತೋಮ
ಹೊಡಕರಿಸಿ ಹಳವಿಗೆಯ ದಾಂಟಿತಮುನು!

೯

ಹೊಳಲ ಬಳಿಯುಪವನದೊಳಿರುವ ನವಿಲುಗಳೊಲಿದು
ಮದವೇರಿ ಕುಣಿಯವೊಲು ಮೋದವೆರೆದು
ಶಂಖಾದಿ ಮಂಗಳಧ್ವಾನಂಗಳೊಡನಂದು
ದಿಗ್ದಿಗಂತವ ಕವಿದು ಘೋರ್ಗರೆದುದು.

೧೦

ಆ ಪತಿಂವರೆ ಕ್ಲಪ್ತವೈವಾಹವೇಷದೊಳು
ಪರಿವಾರನಾರಿಯರು ಬಳಸಿಬರಲು
ಬೋವಿಗಳು ಹೊತ್ತಿರುವ ಶಿಬಿಕೆಯೊಳು ಸಾರಿದಳು
ಮಂಚಮಧ್ಯದ ರಾಜಪಥವನವಳು.

೧೧

ನೃಪನೇತ್ರಲಕ್ಷ್ಯೈಕಲಕ್ಷ್ಯೆಯೆನಿಪಾಕೆಯೊಳು
ವಿಧಿಯ ಸೃಷ್ಟ್ಯತಿಶಯಮೆನಿಪವಳೊಳು
ಬಿಳ್ದರಂತಃಕರಣದಿಂದಲಂದಾನೃಪರು
ತನುಮಾತ್ರದಿಂದಿರ್ದರಾಸನದೊಳು.

೧೨

ಆ ಬಳಿಕ ಬಗೆಬಗೆಯ ಶೃಂಗಾರಚೇಷ್ಟೆಗಳು
ಆಕೆಯನು ಬಯಸಿದವನೀಶ್ವರರೊಳು
ಮೊಟ್ಟಮೊದಲುದಿಸಿದವು ಪ್ರಣಯದೂತಿಯರೋಲು
ಮರಗಳಲಿ ಮೊಳೆಯುವೆಳೆ ಚಿಗುರವೋಲು.

೧೩

ತಾವರೆಯ ನಾಳವನು ಕೈಯೊಳಾಂತವನಿಪನು
ದಳಗಳಿಂದಳಿಗಳನು ಸೋವುತಿಹನು
ಸುರಿವ ಬಂಡಿನೊಳಂದು ರಚಿಸಿ ಪರಿವೇಷವನು
ಲೀಲಾರವಿಂದವನು ತಿರುಗಿಸುವನು.

೧೪

ರತ್ನಕಾಂತಿಚ್ಛುರಿತ ಕೇಯೂರದಗ್ರದೊಳು
ಭುಜಗಳಿತ ಸುಮಮಾಲೆ ತೊಡರಿ ನಿಲಲು
ರಸಿಕನೃಪನಿನ್ನೊರುವನದನು ಮೇಲೇರಿಪನು
ತನ್ನ ಸೊಬಗಿನ ಮೊಗವ ಕೊಂಕುಗೈದು.

೧೫

ತನ್ನ ಚೆಲುಗಣ್ಗಳನದೊಂದಿನಿಸು ಪೆರದೆಗೆದು
ಕಾಲ್ವೆರಲನೊಂದಿನಿಸು ಕೊಂಕುಗೈದು
ಕೇಸುಗರ ಕೆಂಬೆಳಗು ಹಿಂದಿರುಗಿ ಕವಿದಂದು
ಹೊನ್ನಮಣೆಯೊಳು ಬರೆವನಿನ್ನೊರ್ವನು.

೧೬

ಹೆಗಲು ನಸುನಿಮಿರಿದಂತಿರಲೊರುವನವನಿಪನು
ಒರಗುದಿಂಬಿನೊಳೂರುತೆಡದೋಳನು
ಕಟಿಯ ಕೆಲದೊಳು ಹಾರ ತೊನೆಯುವೊಲು ದೇಹವನು
ನಸುಮುರಿದು ಕೆಳೆಯನನು ನುಡಿಯಿಸಿದನು.

೧೭

ಪದವುಗಾತಿಯದೊಂದು ಪಸದನಕೆ ಸಲುವೊಂದು
ಕನ್ನವುರದೆಳೆಯ ಬಿಳಿಗೇದಗೆಯನು
ನಲ್ಲೆಯರ ಪೊರೆವಾರನುಗಿವ ಸೆಳ್ಳುಗುರಿನೊಳು
ಸೀಳಿದನು ನವಯುವಕನಿನ್ನೊರುವನು.

೧೮

ತಾವರೆಯ ಕೆಂಪಿನವೊಲೆಸೆಯುತಿರುವಂಗೈಯ
ಹೊಳೆವ ಶುಭಲಕ್ಷಣದ ಧ್ವಜರೇಖೆಯ
ಶುಭ್ರರತ್ನಾಂಗುಳೀಯಪ್ರಭೆಯ ಸಂಗತಿಯ
ಪಗಡೆಗಳನಾಡಿದನು ಪೆರತೊರ್ವನು.

೧೯

ಓರಣದೊಳೊಪ್ಪಿದುದನೋರೆವೋಯಿತ್ತೆಂದು
ಮಗುಡವನು ನೇರಿತಾಗಿರಿಸಲೆಂದು
ಮಣಿಕಾಂತಿ ತೂರಿಬರಲಂಗುಳಿಯ ರಂಧ್ರವನು
ಮಗುಡದೊಳು ಕೈಯಿಟ್ಟನಿನ್ನೊರುವನು.

೨೦

ನೃಪತತಿಯ ಸಂತತಿಯ ಚರಿತೆಗಳನರಿತವಳು
ಪುರುಷರೊಲು ವಾಗ್ವಿಭವವೆಸೆಯುವವಳು
ಬಳಿಕ ದೌವಾರಿಕೆ ಸುನಂದೆಯಿಂತುಸುರಿದಳು
ಕನ್ಯೆಯನು ಮಾಗಧನ ಬಳಿಗೊಯ್ದಳು.

೨೧

ನೃಪನಿವನು ಜನಮನೋರಂಜನವಿಚಕ್ಷಣನು
ಶರಣಜನರಾಶ್ರಯನು ಗುರುಸತ್ತ್ವನು
ಮಗಧಸಂರಕ್ಷನು ಶತ್ರುಜನಶಿಕ್ಷಕನು
ಸಾರ್ಥಕಪರಂತಪಾಂಕಿತನು ತಾನು.

೨೨

ಸಾಸಿರದ ಲೆಕ್ಕದೊಳು ಅನ್ಯನೃಪರಿರಲೇನು
ಧರೆಯಾದುದಿವನಿಂದೆ ರಾಜನ್ವತಿ
ತಾರೆನೀಹಾರಿಕೆಗಳಮಿತಮೆನಲಿರಲೇನು
ನಿಶೆಯಾಯ್ತು ಶಶಿಯಿಂದೆ ಜ್ಯೋತಿಷ್ಮತಿ !

೨೩

ಅನವರತ ತಾನೆಸಗುವಧ್ವರದೊಳೀನೃಪನು
ಆಹ್ವಾನಗೈವನು ಶಚೀಶ್ವರನನು
ಶಚಿಯ ಬೆಳ್ಗೆನ್ನೆಗಿಳಿದಲಕದೊಳಗೆಸಗುವನು
ನೃಪನಿವನು ಮಂದಾರಶೂನ್ಯತೆಯನು.

೨೪

ವರಿಸಲೆಂದೆಳಸಿದರೆ ವರಣೀಯನೀತನನು
ಪುಷ್ಪಪುರವನು ಪೊಗುವೊಡಂದು ನೀನು
ಹರ್ಮ್ಯವಾತಾಯನದೊಳೀಕ್ಷಿಪ ಪುರಾಂಗನೆಯ-
ರಕ್ಷಿಗಳಿಗೊದವಿಸುವೆ ಪರ್ವಸಿರಿಯ.

೨೫

ಪಡಿಯರಿತಿ ನುಡಿಯಲಿಂತಿಂದುಮತಿ ನೃಪತಿಯನು
ನೋಡಿ ಕೆಮ್ಮನೆ ನಮಿಸಿ ಬೀಳ್ಕೊಂಡಳು
ದೂರ್ವೆಯೊಡವೆರೆದಿರುವ ಗುಡಪುಷ್ಪಮಾಲೆಯನು
ಒಂದಿನಿಸು ತೊನೆಯಿಸುತಲಡಿಯಿಟ್ಟಳು.

೨೬

ಆ ಬಳಿಕ ನೃಪನಿಂದ ನೃಪನ ಬಳಿಗಾಕೆಯನು
ಕೊಂಡೊಯ್ದಳಾ ಆವಳ ಕಂಬಿಯವಳು
ಗಾಳಿಯೆಬ್ಬಿಸಿದ ತೆರೆಯೋಳಿಯರಸಂಚೆಯನು
ಪದುಮದಿಂ ಪದುಮದೆಡೆಗೊಯ್ಯುವೋಲು.

೨೭

ಅಮರಲೋಕಾಂಗನೆಯರಾರಂಗವಟ್ಟವನು
ಕಾಮಿಸುವರಾತನಿವನಂಗನೃಪನು
ಅಂಗವರಿದವರಿಂ ಮತಂಗಗಳ ಪಳಗಿಪನು
ಸುರಪುಂಗವನ ಪದವನನುಭವಿಪನು.

೨೮

ತಮ್ಮ ವೊಲೆಗಳ ಮೇಲೆ ತೋರಮುತ್ತಿನೊಲಿರುವ
ಕಂಬನಿಯು ಸುರಿಯಿಸುತೆ ಪಗೆವೆಂಡಿರು
ಅಳುವಂದು ತೋರುವುದು ಮುಂಕೊಂಡ ಹಾರವನು
ಮರಳಿತ್ತನೆನುವವೊಲು ದಾರಗಳೆದು.

೨೯

ಒಂದುವೆರೆದೊಂದೆಡೆಯೊಳಿರದವರು ನೆಲಸಿಹರು
ಈತನೊಳು ಬಂದು ಸಿರಿಸರಸತಿಯರು
ತಕ್ಕವಳು ನೀನವರ ಜೊತೆಗಿರಲು ಕಲ್ಯಾಣಿ!
ಪುಸಿಯದೊಳ್ನುಡಿಯಿಹುದು ಚೆಲುವಿರುವುದು.

೩೦

ಅಂಗಪತಿಯತ್ತಣಿಂದಕ್ಷಿಯನು ಹೊರಳಿಸುತೆ
ತೆರಳೆಂದಳಿಂದುಮತಿ ಸಖಿಯ ಕುರಿತು
ನೃಪನೇನೊ ವರಣೀಯನವಳುಂ ವಿವೇಕಿ ದಿಟ
ಆದೊಡೇಂ ಭಿನ್ನರುಚಿ ಲೋಕಮಕಟ!

೩೧

ಬಳಿಕ ಪೆರತೊರ್ವನನು ಕಮನೀಯರೂಪನನು
ಶತ್ರುದುಸ್ಸಹನನವನೀಶ್ವರನನು
ತನ್ನವೋದಯಶಶಿಯನೆಂತಂತು ತೋರಿದಳು
ಇಂದುಮತಿಗೊಡನಂದು ಬಾಗಿಲವಳು.

೩೨

ಉದ್ದನೆಯ ತೋಳವನು ತೆಳ್ಳನೆಯ ಕಟಿಯವನು
ಹೇರೆದೆಯ ಗಂಡಿವನು ಭೂಪಾಲನು
ವಿಶ್ವಕರ್ಮನು ಸಾಣೆಗೊಡ್ಡಿದಿನಬಿಂಬದೊಲು
ಇಹನವಂತೀಶ್ವರನು ರಾಜಸುತನು.

೩೩

ಶಕ್ತಿಸಂಪನ್ನನಾದಿವನ ದಿಗ್ವಿಜಯದೊಳು
ಮುಂಚೂಣಿಯಶ್ವಗಳ ಖುರಹತಿಯೊಳು
ಒಗೆದ ಧೂಳಿೊದಗಿಪುದು ಸಾಮಂತಭೂಭುಜರ
ಮಣಿಮಕುಟರತ್ನರುಚಿಗಸ್ತಮಯವ.

೩೪

ಸೋಮಶೇಖರ ನೆಲಸಿದಾ ಮಹಾಕಾಳಕತಿ-
ಸನಿಯದೊಳೆ ವಾಸಿಸುವ ಕತದೊಳಿವನು
ಕದ್ದಿಂಗಳೊಳವೊಲಿದು ನಿಜವಿಲಾಸಿನಿಯರನು
ಜೊನ್ನವೆರೆದಿರುಳಿನೊಳು ಸೇವಿಸುವನು.

೩೫

ಶಿಪ್ರೆಯಾ ತೆರೆತೆರೆಯ ತಣ್ಣನೆಯ ಗಾಳಿಯೊಳು
ಒಯ್ಯನೊಯ್ಯನೆ ತೂನೆವ ನಂದನದೊಳು
ರಮಿಸಲತಿರತಿಯೆ ನಿನಗೀ ಯುವಕಭೂಪನೊಳು
ಇಂದುಮತಿ ರಂಭೋರು ಪೇಳೆಂದಳು.

೩೬

ಬಾಂಧವಜನಾಂಬುಜವಿಕಾಸನೋಲ್ಲಾಸನೊಳು
ತಾಪಶೋಷಿತಶತ್ರುಕರ್ದಮನೊಳು
ಸುಕುಮಾರಿ ಹಿಂದೆಗೆದಳೊಂದಿಸದೆ ಭಾವವನು
ಸೂರ್ಯನೊಳು ಮನವಿಡಿದ ನೈದಿಲೆಯೊಲು.

೩೭

ಪದ್ಮಾಂತರಾಭೆಯನನೂನಗುಣವಂತೆಯನು
ಸುದತಿಯನು ವಿಧಿಯಮುಳಚಾತುರಿಯನು.
ಆ ಅನೂಪೇಶ್ವರನ ಸಮ್ಮುಖಕೆ ಕರೆತಂದು
ನುಡಿದಳು ಸುನಂದೆ ಪಡಿಯರಿತಿಯಂದು.

೩೮

ಪದಿನೆಂಟು ದೀವಿಯೊಳು ಯೂಪಗಳ ನೆಟ್ಟವನು
ಬವರದೊಳು ಸಾಸಿರದ ತೋಳ್ಗಳವನು
ಅನ್ಯರಿಗಲಭ್ಯವಹ ರಾಜಶಬ್ದಾನ್ವಿತನು
ಕಾರ್ತವೀರ್ಯನು ಯೋಗಿ ಮೆರೆದಿರ್ದನು.

೩೯

ನೆನೆಯುವರದೇಗಳಿಗೆಗಳಿಗಜ್ಜದೆಸಕವನು
ತನ್ನ ಜನರಾಗಳಿಗೆಗೈತರುವನು
ಜನಗಳಂತಃಕರ್ಮದೋಷಗಳನಳಿಸುವನು
ಚಾಪಧರ ಕಾರ್ತವೀರ್ಯವಿನೇತನು.

೪೦

ಆನನಪರಂಪರೆಯಿನುಸಿರೆಳೆದು ಬಿಡುವವನು
ಜ್ಯಾಬಂಧನಿಷ್ಪಂದ ಭುಜನಿಚಯನು
ವಿಜಿತಸುರವಲ್ಲಭನು ಮಹಿತಲಂಕೇಶ್ವರನು
ದಯೆ ದೊರೆಯುವನ್ನೆವರ ಸೆರೆಯಿರ್ದನು.

೪೧

ಆತನಮಲಾನ್ವಯದೊಳೀಪ್ರತೀಪಾಂಕಿತನು
ಶ್ರುತವೃದ್ಧಸೇವಕನು ಜನಿಸರುವನು.
ಕರ್ಚಿದನು ಆಶ್ರಯದ ದೋಷದಿಂದಾದುದನು
ರಮೆ ಸಹಜಲೋಲೆಯೆನುವಪಯಶವನು.

೪೨

ಕೊಳುಗುಳದೊಳಗ್ನಿಯ ಸಹಾಯವನು ಪಡೆದಿವನು
ಅರಸುಗಳ ಕಡೆಯಿರುಳಿನಂತೆ ಮೆರೆವ
ಭಾರ್ಗವನ ಕೊಡಲಿಯನು ತಾವರೆಯ ಎಸಳವೊಲು
ಬಗೆಯುವನು ಈ ಪ್ರತೀಪಾಖ್ಯನೃಪನು.

೪೩

ಅಲ್ಲಿ ಮಾಹಿಷ್ಮತಿಯ ನಗರವೆನುವಂಗನೆಯ
ವಪ್ರದ ನಿತಂಬದೊಳು ಕಾಂಚಿಯೋಲು
ಕಂಗೊಳಿಪ ನರ್ಮದೆಯ ಸೌಧದಿಂ ನೋಡುವರೆ
ನಿಡುದೋಳ ದೊರೆಯು ತೊಡೆಲಕುಮಿಯೆನಿಸು.

೪೪

ಮೋಡವಿರದಂಬರದೊಳೆಸೆವ ಶರದಿಂದುವನು
ಸರಿಯೆನಿಸದೊಪ್ಪದಿರುವಂಬುಜದೊಲು
ಮೋಹನಾಕಾರದಿಂದೆಸೆಯಲೀನವನಿಪನು
ಸರಿಯೆನಿಸದಿಂದುಮತಿಯೊಪ್ಪದಿಹಳು.

೪೫

ಆಚಾರಶುದ್ಧಿಯಿಂದೀಸುಷೇಣಾಧಿಪನು
ಬೆಳಗುತಿಹನನ್ವಯದ್ವಯದೀಪನು
ನಾಕಾದಿಲೋಕದೊಳು ಕೀರ್ತಿತನು ತಾನೆಂದು
ಪಡಿಯರಿತಿಯಾತನನು ಪೊಗಳ್ದಳಂದು.

೪೬

ಯಜ್ಞಗಳನೆಸಗಿಹನು ನೀಪಕುಲಸಂಭವನು
ಗುಣಗಳಿಂದಾಶ್ರಯಿಸುತೀ ನೃಪನನು
ನಿಜವೈರವಳಿದಿಹವು ಆಶ್ರಮದ ಮುನಿಗಳನು
ಆಶ್ರಯಿಸಿ ಪಗೆಯುಳಿವ ಮೃಗಗಳಂತೆ.

೪೭

ನಯನಮೋಹಕವೆನುವ ಚಂದ್ರಕಿರಣದೊಲಿಂದು
ತನುಕಾಂತಿ ನಿಳಯದೊಳು ತೊಳಗುತಿಹುದು
ತೃಣಗುಲ್ಮಕಲಿತರಿಪುಮಂದಿರದೊಳೆಸೆದಪುದು
ಭುಜದಾರ್ಪಿನಾತಪದಲಂಪು ಸಂದು.

೪೮

ನೀರಾಟವಾಡುತಿರುವಂತವುರದಂಗನೆಯ-
ರೆದೆಯ ಚಂದನವುಡಿಯ ತೊಡೆಯುವಂದು
ಮಥುರೆಯೊಳೆ ಸುರನದಿಯ ಬೆಳ್ಳನೆಯ ತೆರೆತೆರೆಯ
ಮಿಲನವನು ಜಗುನೆದೆರೆ ಪಡೆಯಲಿಹುದು.

೪೯

ಯಮುನೆಯೊಳು ನೆಲಸಿರುವ ಕಾಳೀಯನೆನುವವನು
ಗರುಡನತ್ತಣಿನಳುಕಿ ಕೊಟ್ಟ ಮಣಿಯ
ತನ್ನೆದೆಯ ಬೆಳಗುತಿರುವಂದದೊಳು ಧರಿಸಿದನು
ಮಣಿಸಿದನು ಕೌಸ್ತುಭವ ತಳೆದ ಹರಿಯ.

೫೦

ಜವ್ವನಿಗನೀತನನು ಮದುವೆನಿಲುವೊಡೆ ನೀನು
ಹೂದಳಿರ ತೆಳ್ಳನೆಯ ಹಾಸುಗೆಯೊಳು
ಚೈತ್ರವನದಂತಿರುವ ವೃಂದಾವನಾಂತರದೆ
ಯೌವನದ ಫಲಮುಣವೆ ತರಳೆ ಮುದದೆ.

೫೧

ಅಲ್ಲಿ ಗೋವರ್ಧನದೊಳಾಚಾರು ದರಿಗಳೊಳು
ಶೈಲೇಯಗಂಧದ ಶಿಲಾತಲದೊಳು
ನೆನೆದರೆಯ ಬಂಡೆಯೊಳು ಕುಳಿತು ಮಳೆಗಾಲದೊಳು
ನವಿಲುಗಳು ಕುಣಿವುದನು ನೋಡು ನೀನು.

೫೨

ಇಳೆಯೆರೆಯನಾತನನು ದಾಂಟಿಪ್ರೋದಳು ಕನ್ಯೆ
ಸುಳಿಯ ಪ್ರೊರ್ಕುಳ ಚೆಲುವೆ ಅನ್ಯನಿನಿಯೆ
ಕಡಲೆರೆಯನೊಡವೆರೆಯಲೆಡೆಯೆಡೆಯ ಬೆಟ್ಟವನು
ಬಳಸಿ ತೊರೆ ಮುಂಬರಿಯುವಂತೆ ತಾನು.

೫೩

ಅಂಗದದ ಬಾಹುವಿನ ಹೇಮಾಂಗದಾಂಕಿತನ
ಆ ಕಳಿಂಗಾಧಿಪನ ಎದುರು ನಿಲಲು
ಬಾಲೆಯನು ಬಾಲೇಂದುವದನೆಯನು ಆ ನೃಪನ
ಕಥನದಿಂ ಪಡಿಯರಿತಿ ತಣಿಯಿಸಿದಳು.

೫೪

ಈತನು ಮಹೋದಧಿ ಮಹೇಂದ್ರಂಗಳೀಶ್ವರನು
ಅಂತೆಯೆ ಮಹೇಂದ್ರಾದ್ರಿ ಸಮಸತ್ವನು
ಮದಿಸಿದಾನೆಯ ನೆಪದೊಳಿವನೊಂದು ಯಾತ್ರೆಯೊಳು
ತೋರ್ಪದು ಮಹೇಂದ್ರನ್ಯೆತರ್ಪಪ್ರೋಲು.

೫೫

ಸುಭುಜನು ಧನುರ್ಧರಾಗ್ರೇಸರನು ಧರಿಸಿಹನು
ಜ್ಯಾಘೂತರೇಖೆಗಳ ಭುಜಯುಗದೊಳು
ಯುದ್ಧದೊಳು ಸೆರೆವಿಡಿದ ಪಗೆಸಿರಿಯ ಕಾಡಿಗೆಯೊ
ಳದ್ದಿರುವ ಕಂಬನಿಯ ಸಾಲಿನವೊಲು

೫೬

ಅರಮನೆಯ ಸನಿಹದೊಳೆ ಪೆರ್ಗಡಲು ಮೆರೆದಪುದು
ಕಿಟಕಿಯೊಳೆ ತೆರೆಗಳನು ಕಾಣಲಹುದು
ಯಾಮತೂರ್ಯಂಗಳನು ಧಿಕ್ಕರಿಪ ಮಂದ್ರದೊಳು
ನೃಪನನನೆಚ್ಚರಿಸುವುದು ತಾನೆ ಕಡಲು.

೫೭

ತೀರತಾಲೀವನದ ಮರ್ಮರನಿನಾದದೊಳು
ವಿಹರಿಸುವನೊಡವೆರೆದು ಕಡಲೆಡೆಯೊಳು
ದ್ವೀಪಾಂತರಾನೀತದೇವಸುಮದೆಲರಿನೊಳು
ಮೈಯ ಬೆವರಿನ ಹನಿಯ ನೀಗಿಸಿಕೊಳು.

೫೮

ಭೋಜರಾಜನ ತಂಗಿ ರೂಪಗುಣ ಕಮನೀಯೆ
ಸವಿವಾತುಗಳನಿಂತು ದೂತಿ ನುಡಿಯೆ
ನೀತಿಯಿಂ ಬಳಿಸಾರ್ದ ಲಕ್ಷ್ಮಿ ಹತಭಾಗ್ಯನನು
ತೊರೆವಪ್ರೊಲು ತೊರೆದಳವಳವನಿಪನನು.

೫೯

ನಾಗಪುರದೊಡೆಯನನು ದೇವಸಮರೂಪನನು
ಆ ಬಳಿಕ ತೋರಿದಳು ದೌವಾರಿಕೆ
ಪೇಳಿದಳು ಇಂದುಮತಿಗವಳಿಂತು ಈತನನು
ನೋಡೌ ಚಕೋರಾಕ್ಷಿ ನೀಲಾಲಕೆ !

೬೦

ಪಾಂಡ್ಯನೃಪವರನಿವನು ಲಂಬಮುಕ್ತಾಸರನು
ಚಂದನದ ಚರ್ಚೆಗಳ ಸೊಬಗಿನವನು
ಹೊಳೆಯುವೆಳೆಬಿಸಿಲಿನೊಳು ಸಾನು ಕೆಂಬಣ್ಣವನು
ತಳೆದ ನಿರ್ಝರದದ್ರಿಪ್ರೋಲೆಸೆವನು.

೬೧

ವಿಂಧ್ಯವನು ಸದೆದವನು ಅಬ್ಧಿಯನು ಕುಡಿದವನು
ಆ ಅಗಸ್ತ್ಯನು ತಾನೆ ಬಂದಿವನನು
ಅಶ್ವಮೇಧಾವಭೃತಸ್ನಾನಾದ್ರ್ರಮೂರ್ತಿಯನು
ದಿನವು ಸುಸ್ನಾನವನು ಬೆಸಗೊಳುವನು.

೬೨

ಹರನಿಂದನನ್ಯಲಭ್ಯಾಸ್ತ್ರವನು ಪಡೆದಿವನು
ಆ ಜನಸ್ಥಾನಕೆಡರೊಡ್ಡಿದವನು
ಎಂದಿವನೊಳಣಿಗೈದು ಸಂಧಿಯನು ರಾವಣನು
ಸುರಲೋಕದಿಗ್ವಿಜಯಕ್ಕೈದಿರ್ದನು.

೬೩

ನೀಂ ಯಥಾವಿಧಿಯಿಂದಲೀ ಮಹಾಕುಲಜನನು
ಕೈವಿಡಿದು ಭೂರಮೆಯ ತೆರದೊಳಿಂದು
ರತ್ನಾಬ್ಧಿಮೇಖಲೆಯ ದಕ್ಷಿಣದಿಗಂಗನೆಯ
ಸವತಿಯೆಂದೊಪ್ಪಿಕೊಳು ತರಳೆ ನಲಿದು.

೬೪

ತಾಂಬೂಲವಲ್ಲಿಗಳಿನೊಡವೆರೆದ ಪೂಗಗಳು
ಏಲಾಲತಾಶ್ಲಿಷ್ಟಚಂದನಗಳು
ಮೆರೆವ ಮಲಯಸ್ಥಲತಮಾಲತರುತಲ್ಪದೊಳು
ರಮಿಸು ನೀಂ ಲೀಲೆಯಿಂದೆಂದಳವಳು.

೬೫

ಇಂದೀವರಶ್ಯಾಮತನುವೀನೃಪೋತ್ತಮನು
ಗೋರೋಚನಾಗೌರವರ್ಣೆ ನೀನು
ಘನತಟಿದ್‌ಯೋಗದೊಲು ನಿಮ್ಮುಭಯ ಸಂಗಮದೆ
ಅನ್ಯೋನ್ಯಕಾಂತಿ ವರ್ಧಿಸಲಿ ಭರದೆ.

೬೬

'ಆ ವಿದರ್ಭಾಧಿಪತಿಯವರಜೆಯ ಚೇತದೊಳು
ಕೆಳದಿಯುಪದೇಶಕೆಡೆ ದೊರೆಯದಿಹುದು
ಭಾನುವನು ಕಾಣದೆ ಮುಗುಳ್ಚಿದರವಿಂದದೊಳು
ಶಶಿಕಿರಣಕೆಡೆ ದೊರೆಯದಂತಾದುದು.

೬೭

ಇರುಳಿನಲಿ ಸಂಚರಿಪ ದೀಪಾಂಕುರಂಬೋಲು
ಆವಾವ ದೊರೆಗಳನು ಅವಳುಳಿದಳು
ಆ ಆ ನೃಪೋತ್ತಮರು ಕುಸಿದರು ವಿವರ್ಣದೊಳು
ರಾಜಪಥದಿರ್ಕೆಲದ ಸೌಧಗಳೊಲು.

೬೮

ಆ ಪತಿಂವರೆ ಬಳಿಕ ಅಜನ ಬಳಿಗೈದುವರೆ
ವರಿಸುವಳೊ ವರಿಸಳೋ ತನ್ನನೆಂದು
ಆಕುಲದೊಳಿಲರಜನು ಅಂಗದದ ಬಲಭುಜವು
ಹಾರುತೊಳಸಂಶಯವನಳಿಸಿರ್ದುದು.

೬೯

ಸರ್ವಾಂಗಸುಂದರನ ಸಾರಿದಂದರಗುವರಿ
ತಡೆದಳಂದನ್ಯೋಪಗಮನವದನು
ಚಿಗುರಿದಾಮ್ರದ ತರುವ ಸಾರಿಬಂದಾ ಬವರಿ
ಪೆರತೊಂದು ಭೂರುಹವನೆಣುವುದೇನು !

೭೦

ಇಂದುಮತಿ ಇಂದುರುಚಿರುಚಿರಾಂಗಿ ಯಾತನೊಳು
ಬಗೆಸೋತು ನಿಂದುದನು ನೋಡಿದವಳು
ಪರಿವಿಡಿಯನರಿತವಳು ಬಿತ್ತರಿಸತೊಡಗಿದಳು
ಇಂದುಮತಿಗಿಂತೆಂದು ಆ ಸುನಂದೆ.

೬೧

ವಿಂಧ್ಯವನು ಸದೆದವನು ಅಬ್ಧಿಯನು ಕುಡಿದವನು
ಆ ಅಗಸ್ತ್ಯನು ತಾನೆ ಬಂದಿವನನು
ಅಶ್ವಮೇಧಾವಭೃತಸ್ನಾನಾರ್ದ್ರಮೂರ್ತಿಯನು
ದಿನವು ಸುಸ್ನಾನವನು ಬೆಸಗೊಳುವನು.

೬೨

ಹರನಿಂದನನ್ಯಲಭ್ಯಾಸ್ತ್ರವನು ಪಡೆದಿವನು
ಆ ಜನಸ್ಥಾನಕೆಡರೊಡ್ಡಿದವನು
ಎಂದಿವನೊಳಣೆಗೈದು ಸಂಧಿಯನು ರಾವಣನು
ಸುರಲೋಕದಿಗ್ವಿಜಯಕೈದಿರ್ದನು.

೬೩

ನೀಂ ಯಥಾವಿಧಿಯಿಂದಲೀ ಮಹಾಕುಲಜನನು
ಕೈವಿಡಿದು ಭೂರಮೆಯ ತೆರದೊಳಿಂದು
ರತ್ನಾಬ್ಧಿಮೇಖಲೆಯ ದಕ್ಷಿಣದಿಗಂಗನೆಯ
ಸವತಿಯೆಂದೊಪ್ಪಿಕೊಳು ತರಳೆ ನಲಿದು.

೬೪

ತಾಂಬೂಲವಲ್ಲಿಗಳಿನೊಡವೆರೆದ ಪೂಗಗಳು
ಏಲಾಲತಾಶ್ಲಿಷ್ಟಚಂದನಗಳು
ಮೆರೆವ ಮಲಯಸ್ಥಲತಮಾಲತರುತಲ್ಪದೊಳು
ರಮಿಸು ನೀಂ ಲೀಲೆಯಿಂದೆಂದಳವಳು.

೬೫

ಇಂದೀವರಶ್ಯಾಮತನುವೀನೃಪೋತ್ತಮನು
ಗೋರೋಚನಾಗೌರವರ್ಣೆ ನೀನು
ಘನತಟಿದ್ಯೋಗದೊಲು ನಿಮ್ಮುಭಯ ಸಂಗಮದೆ
ಅನ್ಯೋನ್ಯಕಾಂತಿ ವರ್ಧಿಸಲಿ ಭರದೆ.

೬೬

ಆ ವಿದರ್ಭಾಧಿಪತಿಯವರಜೆಯ ಚೇತದೊಳು
ಕೆಳದಿಯುಪದೇಶಕೆಡೆ ದೊರೆಯದಿಹುದು
ಭಾನುವನು ಕಾಣದೆ ಮುಗುಳ್ಚಿದರವಿಂದದೊಳು
ಶಶಿಕಿರಣಕೆಡೆ ದೊರೆಯದಂತಾದುದು.

೬೭

ಇರುಳಿನಲಿ ಸಂಚರಿಪ ದೀಪಾಂಕುರಂಬೋಲು
ಆವಾವ ದೊರೆಗಳನು ಅವಳುಳಿದಳು
ಆ ಆ ನೃಪೋತ್ತಮರು ಕುಸಿದರು ವಿವರ್ಣದೊಳು
ರಾಜಪಥದಿರ್ಕೆಲದ ಸೌಧಗಳೊಲು.

೬೮

ಆ ಪತಿಂವರೆ ಬಳಿಕ ಅಜನ ಬಳಿಗೈದುವರೆ
ವರಿಸುವಳೊ ವರಿಸಳೋ ತನ್ನನೆಂದು
ಆಕುಲದೊಳಿಲರಜನು ಅಂಗದದ ಬಲಭುಜವು
ಹಾರುತೊಳಸಂಶಯವನಳಿಸಿರ್ದುದು.

೬೯

ಸರ್ವಾಂಗಸುಂದರನ ಸಾರಿದಂದರಗುವರಿ
ತಡೆದಳಂದನ್ಯೋಪಗಮನವದನು
ಚಿಗುರಿದಾಮ್ರದ ತರುವ ಸಾರಿಬಂದಾ ಬವರಿ
ಪೆರತೊಂದು ಭೂರುಹವನೆಣುವುದೇನು !

೭೦

ಇಂದುಮತಿ ಇಂದುರುಚಿರುಚಿರಾಂಗಿ ಯಾತನೊಳು
ಬಗೆಸೋತು ನಿಂದುದನು ನೋಡಿದವಳು
ಪರಿವಿಡಿಯನರಿತವಳು ಬಿತ್ತರಿಸತೊಡಗಿದಳು
ಇಂದುಮತಿಗಿಂತೆಂದು ಆ ಸುನಂದೆ.

೭೧

ಇಕ್ಷ್ವಾಕು ವಂಶದೊಳು ವಿಖ್ಯಾತನಾದವನು
ನೃಪಕಕುದನೊಗೆದನು ಕಕುತ್‌ಸ್ಥಾಂಕನು.
ಆದಿನದಿನುತ್ತರದ ಕೋಸಲಮಹೇಶ್ವರರು
ಕಾಕುತ್‌ಸ್ಥರೆನಿಸಿದರು ಕೀರ್ತಿಯುತರು.

೭೨

ಆ ಕಕುತ್‌ಸ್ಥನದೊರ್ಕಿ ಗೊಂದೆಯಾದಿಂದ್ರನನು
ಏರಿ ಹರಲೀಲೆಯೊಳು ರಣದೊಳವನು
ದಾನವಾಂಗನೆಯರ ಕದಂಪುಗಳಿನಳಿಸಿದನು
ಕಣೆಯೆಸೆದು ಮಕರಿಕಾಪತ್ರಗಳನು.

೭೩

ಸುರಕರಿಯ ಹಳಚುವಂದರೆಕಳಚಿದಂಗದದೊ
ಳವನ ತೋಳಿನ ಬಳೆಯ ತಾಗುವಂತೆ
ನಿಜರೂಪದಿಂದಿಂದ್ರನೇರ್ದ ಸಿಂಹಾಸನದೊ-
ಳವನುಮರ್ಧಾಸನದೊಳೆಸೆದನಲ್ತೆ.

೭೪

ಆತನನ್ವಯದೊಳುರುಕೀರ್ತಿ ಜನಿಸಿದನು
ವಂಶಪ್ರದೀಪನು ದಿಲೀಪನೃಪನು
ಕರುಬುತವನೇಕೋನಶತಮುಖವನೆಸಗಿದನು
ಇಂದ್ರಸಂಪ್ರೀತಿಗೆಂದುಳಿದೊಂದನು.

೭೫

ಮತ್ತಕಾಮಿನಿ ಜನರು ಮೈಮರೆದು ಮಲಗಿರಲು
ನಿದ್ರೆಯಿಂದಾವಿಹಾರಾರ್ಥಪಥದೆ
ಚಲಿಸಲಂದನಿಲನುಮಶಕ್ತನೆನೆ ಮೇಲುದನು
ಸೆಳೆದೊಯ್ವ ಚೋರನಾರವನ ದಿನದೆ.

೭೬

ವಿರಚಿಸುವ ಕಾಲದೊಳು ವಿಶ್ವಜಿದ್‌ಯಜ್ಞವನು
ಆ ದಿಲೀಪನ ಸುತನು ರಘುರಾಜನು
ದಿಗ್ವಿಜಯವನು ಗೈದು ಗಳಿಸಿದ ವಿಭೂತಿಯನು
ಮೃತ್‌ಪಾತ್ರಶೇಷವೆನಲೆಸಗಿರ್ದನು.

೭೭

ಅದ್ರಿಶಿರಕೇರಿಹುದು ಅಂಬುಧಿಯೊಳದ್ದಿಹುದು
ಪಾತಾಳತಳವನೊಳಪೊಕ್ಕಿರ್ದುದು
ಊರ್ಧ್ವದೆಸೆಗಡರಿಹುದು ಪರಿಮಿತಿಯೊಳಳವಡದು
ನೃಪನಪಾರಯಶಮಿಂತಿರ್ಪುದಿಂದು.

೭೮

ಅಮರೇಂದ್ರಸೂನು ತಾನಾ ಜಯಂತನು ಎಂತು
ರಘುಸೂನುವೀಯಜನು ಮೆರೆವನಂತು
ಭಾರವನು ಹೋರಿಯುಂ ಗೂಳಿ ಜತೆಗೆಳೆಯುವ್ರೊಲು
ಮಗನುಮಾಸುವನಿಳೆಯನಯ್ಯನಪ್ರೊಲು.

೭೯

ವಿನಯಾದಿ ಗುಣಗಣದೆ ಕುಲದೆ ನವಯೌವನದೆ
ಸಂಪದದೆ ಸದ್ಗುಣದೆ ಲಾವಣ್ಯದೆ
ಅನುರೂಪನಾಗಿಹನು ನಿನಗಜನು ಇವನನೊಲಿ
ರತ್ನಕಾಂಚನಮಿಲನವೀಡೇರಲಿ.

೮೦

ನುಡಿದಿಂತು ಪಡಿಯರಿತಿ ಮಾತು ನಿಲಿಸಿದಳವಳು
ಇಂದುಮತಿ ತಾನಿನಿತು ನಾಣನುಳಿದು
ಸಂವರಣಮಾಲೆವ್ರೊಲೆ ನೃಪಸುತನ ವರಿಸಿದಳು
ಸಂಮೋದಲೋಚನದ ಮಾಲೆಯೆಸೆದು.

೮೧

ಲಜ್ಜೆಯಿಂದಜನೊಳಾದೊಲವರವನೊರೆವುದಕೆ
ಅಸಮರ್ಥೆಯಾದಳಾ ಕುಟಿಲಾಲಕೆ
ಪುಳಕಾಂಕುರಂಗಳವಳಂಗದಿಂದೊಗೆದೊಗೆದು
ಕೊಂಡೆಯವನಾಡಿದವು ಹೊರಗೆ ಬಂದು.

೮೨

ಪರಿಹಾಸಗೈಯಲೆಂದನುರಾಗವತಿಸಖಿಯ
'ನಡೆದಪೆವು ಆರ್ಯೆ ಪೆರತೊರ್ವನೆಡೆಯ'
ಎಂದು ಸಖಿ ನುಡಿದಂದು ಕರುಬು ಕುಡಿನೋಟದೊಳು
ಇಂದುಮತಿ ನಿಜಸಖಿಯನೀಕ್ಷಿಸಿದಳು.

೮೩

ಪರಿಮಳದ ಹುಡಿವೆರೆದು ಕೆಂಬಣ್ಣವಾಂತುದನು
ಮೈದಳೆದ ಒಲುಮೆಯೆನೆ ಮಾಲೆಯದನು
ಕರಭೋರು ತಾನೊಲಿದು ರಘುಸುತನ ಕಂಠದೊಳು
ನಿಜಸಖಿಯ ಕರಗಳಿಂದರ್ಪಿಸಿದಳು.

೮೪

ವರಣೀಯನಾದಜನು ಸುವಿಶಾಲವಕ್ಷದೊಳು
ಜೋಲ್ದಿಳಿದ ಮಂಗಳದ ಸುಮಮಾಲೆಯ
ಭಾವಿಸಿದನಾತ್ಮಗಳಕರ್ಪಿಸಿದ ಭುಜಗಳೊಲು
ವರಿಯಿಸಿದ ಭೋಜರಾಜಾವರಜೆಯ.

೮೫

ಮೇಘಮುಕ್ತ ಶರಚ್ಚಂದ್ರನೆಡೆಯನೈದಿ ಮೆರೆಯುತಿರುವ ಚಂದ್ರಿಕೆ
ಸದೃಶಮಪ್ಪತೋಯನಿಧಿಯ ಸಾರಿ ನಿಂದ ಜಹ್ನುಋಷಿಯ ಕನ್ನಿಕೆ
ಎಂದು ಪೌರಜನನಿನಾದವೆದ್ದಿತಂದು ಸದೃಶಗುಣರ ಮಿಲನಕೆ
ಉಳಿದ ರಾಜಸುತರ ಕರ್ಣಕುಹರವೊಡೆದುದವರದೊಂದು ಘೋಷಕೆ!

೮೬

ಹೃಷ್ಟವರನ ಪಕ್ಷದವರದೊಂದುಕಡೆಯೊಳೆಸೆದಿರೆ
ರುಷ್ಟ ನೃಪಸಮಾಜದವರದೊಂದುಕಡೆಗೆ ಕುಸಿದರೆ
ನಗುವ ನಳಿನ ಮುಗಿವ ನೈದಿಲಿಂದಲೆಸೆವ ಆ ಪ್ರಭೆ
ತಳ್ತ ಪೊಳ್ತರೆಯ ಕೊಳಂಬೊಲಿರ್ದುದಂದು ನೃಪಸಭೆ!

## ಏಳನೆಯ ಸರ್ಗ

# ಅಜಪಾಣಿಗ್ರಹಣ

೧

ಸ್ಕಂದನನು ವರಿಸಿರ್ದ ದೇವಸೇನೆಯ ತೆರದೊಳನುರೂಪವರನೊಳನುಜಾತೆ
ಒಡವೆರೆಯಲವರೊಡನೆ ನಗರಪ್ರವೇಶಾಭಿಮುಖಯಾದಾನಾ ಭೋಜನೃಪನು.

೨

ಇಂದುಮತಿ ವರಿಸದಿರಲೊಡೆದ ಹೆಬ್ಬಯಕೆಯೊಳು ಪೊಳ್ತರೆಯ ಉಡುಗಣದೊಲವರು
ರೂಪವನು ವೇಷವನು ನಿಂದಿಸುತಲಿತ್ತ ನಿಜಶಿಬಿರವನು ಪ್ರೋಕ್ಕರವನಿಪರು.

೩

ಶಚಿಯ ಸಾನ್ನಿಧ್ಯವಿರ್ದುದರಿಂದಲೆಡರ ತೊಡಕೊಂದಿನಿಸುಮಾದುದಿಲ್ಲಂದು
ಕಾಕುತ್‍ಸ್ಥನಂ ಕುರಿತು ಕರುಬು ಪುದಿದೊಗೆಮೊಡಂ ನೃಪನಿವಹ ತಾಂ ಕೆಮ್ಮನಿಹುದು.

೪

ಸುರಚಾಪದೊಲು ಹೊಳೆವ ತೋರಣಗಳೆತ್ತಿರುವ ಹೂದಳಿರ ಹರಹಿನೊಳು ಮೆರೆವ
ಹಳವಿಗೆಯ ನೆಳಲಿನೊಳು ತಣ್ಪೀವ ಬೀದಿಯೊಳು ಸಾಗಿದನು ವಧುವೆರೆದು ವರನು.

೫

ಆ ವಧೂವರರನಾಲೋಕಿಪೊಂದಾತುರದೊಳಾನಗರದಂಗನೆಯರಂದು
ಕನಕಜಾಲಂಧ್ರದೊಳಗೀ ಚೇಷ್ಟೆಯಿಂದೆಸೆದರುಳಿದೆಲ್ಲ ಹರಿಬಗಳ ತೊರೆದು.

೬

ಸಡಗರದೊಳೊರ್ವಳಾ ಕಿಟಕಿಯೆಡೆಗೋಡುತಿರೆ ಮಾಲೆಯೊಡನವಳ ಮುಡಿ ಕೆದರೆ
ಕರದೊಳದನಾಂತರೂ ಹೂವುದುರೆ ಜಡೆ ಹೆಣೆದುಕೊಳುವುದನು ನೆನೆದುದಿಲ್ಲರರೆ !

೭

ದ್ರವರಾಗಮಿರ್ದುಮೆಳೆದೊರ್ವಳು ಅಲಂಕರ್ತ್ರಿ ಪಿಡಿದ ಆ ತನ್ನಡಿಯ ತುದಿಯ
ರಚಿಯಿಸಿದಳಲತಿಗೆಯ ಗುರುತುಗಳನಾಗವಾಕ್ಷಂಬರಂ ತೊರೆದಲಸಗತಿಯ.

೮

ಸಿಂಗರಿಸುತಂಜನದೆ ದಕ್ಷಿಣಾಕ್ಷಿಯನೊರ್ವಳಹ ಮರೆತು ವಾಮನೇತ್ರವನು
ಕೂರ್ಚಿಕೆಯ ಪಿಡಿದಂತೆ ಭರದಿಂದಲೈದಿರ್ದಳಾಗವಾಕ್ಷದ ಸಮೀಪವನು.

೯

ಗಮನಭರದಿಂದುಡಿದ ನೀವಿಯನು ವಾತಾಯನಾಂತರನ್ಯಸ್ತಾಕ್ಷಿಯೊರ್ವಳ್
ಕೈಯೊಳಾಂತಿರ್ದಳದರಾಭರಣರುಚಿ ನಾಭಿದೇಶವನು ತಾಂ ಬೆಳಗಿದಾಗಳ್.

೧೦

ಸಂಭ್ರಮದೆ ಜಗ್ಗನೆದ್ದಡಿಯಿಡವಲರೆಕೋದ ಮೇಖಲೆಯ ಮಣಿಗಳಡಿಗಡಿಗೆ
ಉದುರುತಿರಲೊರ್ವಸತಿಯಂಗುಷ್ಠಮೂಲದೊಳು ಸೂತ್ರವೊಂದುಳಿದುದಹ ಕಡೆಗೆ!

೧೧

ಚಲಿಪ ಕಣ್‌ದುಂಬಿ ಮೇಣ್ ಉಗುವ ಕಳ್‌ಗಂಪೆಸೆವ ಕಾತರೆಯರಾನನದಲಂಪು
ವ್ಯಾಪಿಸಿರ್ದಾಗವಾಕ್ಷಂತರಂ ಮೆರೆದುದು ಸಹಸ್ರಪತ್ರಾಭರಣದಂತೆ.

೧೨

ಕಣ್ಗಳಿಂದೀಂಟಿದವರೇಕದೃಶ್ಯನನು ತಾಮೆಣ್ಣದಿಹರನ್ಯವಿಷಯವನು
ಇಂದ್ರಿಯಗಳುಳಿದೆಲ್ಲ ಚೇತನಮುಮಕ್ಷಿಗಳ ತಾಂ ಪೊಕ್ಕವೋಲಿರ್ದರವರು.

೧೩

ಬೆಂಗಡೆಯೊಳವನಿಪರು ವರಿಸೆದೂದಟ್ಟಿದರು ತಾಂ ಸೊಯಂಬರವೆಸಗಿ ಭೋಜ್ಯೆ
ಲೇಸನೆಸಗಿದಳಲ್ಲದಿರೆ ಪಡೆವಳೆಂತೆಣೆಯ ಪತಿಯ ಸಿರಿ ಪಡೆದವೊಲು ಹರಿಯ ?

೧೪

ಸ್ಪೃಹಣೀಯಶೋಭರಿವರಿರ್ವನು ಕುರಿತಜನು ಸಂಘಟಿಸದಿರಲು ತಾನಿಂದು
ವಿಫಲವಾಗುತಲಿತ್ತು ತನ್ನೊಂದು ಸೌಂದರ್ಯನಿರ್ಮಾಣಯತ್ನ ನಿಜವಹುದು.

೧೫

ಇವರೆ ಮೈತಳೆದಿರುವ ರತಿಮದನರೇಕೆನಲು ಅವನಿಪಸಹಸ್ರರೊಳು ಬಾಲೆ
ತನಗೆಣೆಯನಿವನೆಂದು ತಿಳಿದೊಲಿದಳರಿದಪುದು ಪೂರ್ವಭವಸಂಗತಿಯ ಮನವು.

೧೬

ಶ್ರೋತ್ರಸುಖಮೆನಿಸುವೀ ಪುರವಧೂಮುಖಜನಿತಕಥನವನು ಕೇಳುತ್ತಲಜನು
ಸಾರಿದನು ಮಂಗಳವಿಧಾನಂಗಳಿಂದೆಸೆವ ಕನ್ಯಾಪ್ರದಾತೃ ನಿಲಯವನು.

೧೭

ಕಾಮರೂಪೇಶ್ವರನು ಕೈಹಿಡಿಯಲಾಪಿಡಿಯ ಬೆನ್ನಿಂದಲಜನು ಬಳಿಕಿಳಿದು
ನಾರಿಯರ ಬಗೆಯನೊಳವೊಗುವಂತೆ ಭೋಜಸೂಚಿತಸದ್ಮದೊಳಪೊಕ್ಕನಂದು.

೧೮

ಮಧುಪರ್ಕದರ್ಘ್ಯವನು ರತ್ನವನು ನವದುಕೂಲಂಗಳನು ಭೋಜನಿತ್ತುದನು
ವನಿತೆಯರ ಕುಡಿನೋಟದೊಡನೊಡನೆ ಕೈಕೊಂಡನಾ ಮಹಾರ್ಹಾಸನಸ್ಥಿತನು.

೧೯

ಧೃತದುಕೂಲನನು ಆ ವಧುವಿನೆಡೆಗೊಯ್ದರು ವಿನೀತರವರೋಧರಕ್ಷಕರು
ನವಚಂದ್ರಕಿರಣಗಳು ನೊರೆನೊರೆದು ನೊರೆಗರೆಯುವಂಬುಧಿಯದಡಕೊಯ್ಯು
ವೋಲು

೨೦

ಭೋಜಪತಿಪೂಜ್ಯನು ಪುರೋಹಿತನು ಆಜ್ಯಾದಿಗಳಿನಗ್ನಿಯನು ಬೇಳಿದವನು
ಅಗ್ನಿಯನೆ ಸಾಕ್ಷಿಗೈದಾವಧೂವರರ ಕೈಪಿಡಿಸಿದನು ಅಗ್ನಿಕಲ್ಪಕನು.

೨೧

ಆ ರಾಜಸೂನು ನಿಜಹಸ್ತದಿಂದಾ ವಧೂಹಸ್ತವನು ಹಿಡಿದೆಸೆದನಂದು
ಬಳಿಯಶೋಕೆಯ ಲತೆಯ ಚಂದಳಿರ ತನ್ನ ವರಪಲ್ಲವದೊಳಾಂತಾಮ್ರವೆನಲು.

೨೨

ನವಿರೆಳ್ದುದಜನ ಮುಂಗೈಯಂದು ಬೆಮರಿದುದು ಮೀಣೆಂದುಮತಿ ಕೈಯ ಬೆರಲು
ಇರ್ವರನುರಾಗವನು ಆಕ್ಷಣದೊಳಂಗಜನು ಸಮನಾಗಿ ಭಾಗಿಸಿದನೆನಲು.

೨೩

ನೋಡುವೊಂದಾಸೆಯೊಳು ಓರೋರ್ವರಕ್ಷಿಗಳು ಕಡೆಗಣ್ಣಳಿಡೆಗಳಲಿ ಬೆರೆದು
ದಿಟ್ಟಿಗಳು ಕೂಡಿದೊಡನಾಕ್ಷಣದೆ ತಿರುಗುವುವು ಮೂಡುವೆಳಲಜ್ಜೆಯೊಳು ಸಂದು.

೨೪

ಬೆಳಗಿದರು ದಂಪತಿಗಳುಜ್ವಲಿಸುವಗ್ನಿಯನು ಬಲವಂದು ಸುತ್ತುತಿರುವಂದು
ಮೇರುವನು ಬಳಸುತಿರುವನ್ಯೋನ್ಯಸಂಸಕ್ತರಾದಹರ್ನಿಶಿಗಳೆನೆ ಮೆರೆದು.

೨೫

ಲಾಜೆಗಳನರ್ಪಿಸಿದಳಗ್ನಿಯೊಳಗಬ್ಜಭವನಿಭಗುರುವಿನಾಣತಿಯೊಳಾಕೆ
ಗುರುನಿತಂಬಿನಿಯಾಕೆ ಮದಿಸಿದ ಚಕೋರಲೋಲಾಲೋಕೆ ನೀಲಾಳಕೆ.

೨೬

ವರಶಮೀಪಲ್ಲವ ಹವಿರ್ಲಾಜಗಂಧಯುತಪುಣ್ಯಾಗ್ನಿಯಿಂದಲಂದೊಗೆದು
ಎಸೆದುದಾಧೂಮಶಿಖೆಯಾಕೆಯ ಕಪೋಲದೊಳು ಕರ್ಣೋತ್ಪಲಂಬೋಲು ಮೆರೆದು.

೨೭

ಕೆನ್ನೆ ಕೆಂಪಾದುದಂದಾಕುಲಾಕ್ಷಿಗಳಿಂದಲುದುರಿದುದು ಕಜ್ಜಲಯುತಾಶ್ರು,
ಆಚಾರಗತಹೋಮಧೂಮದೊಳು ಬಾಡಿದುದು ಕಿವಿದೊಡವಿನಾಯವಾಂಕುರವುಂ.

೨೮

ಸ್ನಾತಕರು ಮೊತ್ತಮೊದಲಾಬಳಿಕ ಬಂಧುಯುತನೃಪನು ಬಳಿಕಾ ಪುರಂಧ್ರಿಯರು
ಕನಕಾಸನಸ್ಥರಾದಾವಧೂವರರಿಗಾರ್ದ್ರಾಕ್ಷತೆಯ ಸೂಸಿರ್ದರವರು.

೨೯

ಅಧಿಕಸಂಪನ್ನನಾ ಭೋಜಕುಲದೀಪಕನು ತಂಗೆಯ ವಿವಾಹವನು ಗೈದು
ಬೆಸಸಿದನು ಸೇವಕರನಾ ಮಹೀಪತಿಗಳನು ಬೇರೆಬೇರೋಲಗಿಪುದೆಂದು.

೩೦

ಒಳಗೆ ಮೊಸಳೆಗಳಿರುವ ತಿಳಿಮಡುವೊಲೆಳಮುಳಿಸ ಮರೆಯಿಸುತೆ ಹೊರಗೊಲವು ಮೆರೆದೆ
ಭೋಜನನು ಬೀಳ್ಕೊಂಡರವನಿತ್ತ ಸತ್ಕೃತಿಯನವಗೀಯುತುಡುಗೊರೆಯ ನೆವದೆ.

೩೧

ಆ ಮೊದಲೆ ಹೊಂಚನಳವಡಿಸಿಕೊಂಡಾ ರಾಜಲೋಕ ತಾನಜನೈದುವಂದು
ದೊರೆಯಲಿರುವರಸಿಯೆನುವಾಮಿಷವನೀಳ್ದುಕೊಳಲಧ್ವನನು ತಡೆದರೈತಂದು.

೩೨
ಕ್ರಥಕೈಶಿಕಾಭರ್ತನುಂ ಬಳಿಕ ಅನುಜೆಯ ವಿವಾಹವನು ವೈಭವದೆ ನೆಗಳ್ದು
ಸತ್ವಾನುರೂಪದ್ರೈಸಿರಿಯಿತ್ತು ರಾಘವನ ಬೀಳ್ಕೊಂಡು ತೆರಳ್ದನೊಡನಂದು.

೩೩
ಮೂಜಗಕೆ ಪೆಸರಾದ ರಘುಜನೊಡನಧ್ವದೊಳು ಮೂರಿರುಳ ಮಜಲುಗಳೆದವನು
ದರ್ಶಾಂತದೊಳು ರವಿಯನೈತರುವ ಸೋಮನೊಲು ಮರಳಿದನು ಕುಂಡಿನೇಶ್ವರನು.

೩೪
ಹಗೆ ಬೆಳೆದುದಾಮೊದಲೆ ದಿಗ್ವಿಜಯದೊಳು ಧನವ ಕೊಂಡುದಕೆ ಕೋಸಲೇಂದ್ರನೊಳು
ಸಹಿಸರಿಂದದರಿಂದಲೀ ನೃಪರು ತತ್ಸುತಸ್ತ್ರೀರತ್ನ ಲಾಭವಿದನೆಂತುಂ.

೩೫
ಭೋಜಕನ್ಯೆಯನೊಯ್ಯುವಜನನಾಕ್ರಮಿಸಿದರು ದಾರಿಯೊಳು ರಾಜರುದ್ಧತರು
ಬಲಿಯಿತ್ತ ಸಿರಿಯಕೊಳುವಾ ತ್ರಿವಿಕ್ರಮನಂಘ್ರಿಯನು ತಡೆಯುವಿಂದ್ರಾರಿಯಂತೆ.

೩೬
ಅವಳ ರಕ್ಷಣೆಗಾಪ್ತಸಚಿವರನು ಬಹುಯೋಧರೊಡನಿರಿಸಿ ರಘುಕುಮಾರಕನು
ಗಂಗೆಯನು ತೆರೆಯೆದ್ದ ಶೋಣನದವಿದಿರಿಪಂತೆದುರಿಸಿದನರಿವಾಹಿನಿಯನು.

೩೭
ಕಾಲಾಳು ಕಾಲಾಳನಶ್ವಸಾದಿಯ ಹಯಾರೋಹಿ ಮೇಣ್ ರಥಿ ರಥೇಶನನು
ಕರಿಯೇರಿದವನನು ಇಭಾರೂಢನಿರಿಯುತಿರಲಾದುದಂದಾದ್ವಂದ್ವಯುದ್ಧಂ.

೩೮
ಪೌರುಷಾಲಾಪವನು ತೂರ್ಯನದಮದ್ದಿರಲು ಕುಲನಾಮಕಥೆಯನೊರೆಯದೆಯೆ
ಸೂಚಿಸಿದರೋರೊರ್ವರವರ ಅಭಿಧಾನವನು ಬಾಣಾಕ್ಷರಂಗಳಿಂದಲೆಯೆ.

೩೯
ಅಶ್ವಂಗಳಿಂದೆದ್ದು ರಥವಂಶಚಕ್ರಂಗಳಿಂದಲತಿಸಾಂದ್ರಮೆನೆ ಕವಿದು
ಕರಿಕರ್ಣತಾಳದೊಳು ಹಸರಿಸಿದ ರಣಧೂಳಿ ಸೂರ್ಯನನು ತೆರೆಯವೊಲು ಮುಸುಕಿ
ರ್ದುದಂದು.

೪೦

ಗಾಳಿ ತಾನಗಲಿಸಿದ ಬಾಯ್ಗಳಲಿ ಮಿಾನಕೇತನಗಳಾ ರೇಣುವನು ಪಡೆದು
ಕಲುಷಿತನವೋದಕವನೀಂಟುತಿಹ ಪರಮಾರ್ಥಮತ್ಸ್ಯಂಗಳಂತೆಸೆದವಂದು.

೪೧

ನಾಗಗಳ ಲೋಲಘಂಟಾಕ್ವಣಿತದೊಳು ಮೇಣ್ ರಥವನು ರಥಾಂಗನಾದದೊಳು
ಸ್ವಪರಾವಬೋಧವನು ಭರ್ತೃವಭಿಧಾನದೊಳು ತಿಳಿದರಾ ಸಾಂದ್ರರೇಣುವೊಳು.

೪೨

ದೃಷ್ಟಿಪಥವನು ಕವಿದು ಯುದ್ಧದೊಳು ಹಸರಿಸಿದ ರಜದಂಧಕಾರಕೊಡನಂದು
ಶಸ್ತ್ರಕ್ಷತಾಶ್ವವಾರಣವೀರರಿಂದೊಗದ ರಕ್ತಧುನಿ ಬಾಲಾರ್ಕನಂತೆಸೆಯಿತಂದು.

೪೩

ರಕ್ತದೊಳು ಮೂಲವನು ಕಡಿಗೊಂಡು ಅದರ ಮೇಲನಿಲನಾಂದೋಳನಂಗೊಂಡು
ಅಂಗಾರಶೇಷಾಗ್ನಿಯಾಮೊದಲ ಹೊಗೆಯಂತೆ ಹೊಳೆದುದಾ ರಣಧೂಳಿವಿಂಡು.

೪೪

ಹತಿಯ ಹಮ್ಮದವಿಳಿಯೆ ರಥಿ ಹಯವ ತಿರುಗಿಸುವ ಸಾರಥಿಯ ಹಳಿದು
ತನಗೆ ಹತಿಯೆಸಗಿದನ ಕೇತುವನು ಕುರುಪಿಡುತ ಅವನನೆಯೆ ಕೆಡಹಿದನು ಹೊಡೆದು.

೪೫

ಬಿಲ್ಲೋಜರೆಚ್ಚಂಬು ನಡುದಾರಿಯೊಳೆ ಅರಿಶರಂಗಳಿಂ ಕಡಿಗೊಂಡರೇನು
ಆತ್ಮವೇಗಾನುಬಂಧದೊಳೆ ಆ ಲೋಹಾಗ್ರದುಳಿದರ್ಧ ಗುರಿಮುಟ್ಟಿದೇನು !

೪೬

ಗಜಯುದ್ಧದೊಳಗಂದು ಯೋಧರ ಶಿರಂಗಳನು ತರಿದೊಡಂ ಕ್ಷುರನಿಶಿತ ಚಕ್ರಂ
ಶೇನನಖಸಕ್ತಕೇಶಂಗಳೆನಲಾಬಳಿಯಿನುದುರಿರ್ದುದರಿಶಿರಃಪ್ರಚಯಂ.

೪೭

ಆವೊದಲೆ ಏರ್ಗೊಂಡು ಪ್ರತಿಹತಿಯ ಹೊಡೆಯಲಸಮರ್ಥನಾದಶ್ವಸಾದಿಯನು
ಮರಳಿ ತಾಂ ಹೊಡೆಯದೆಯೆ ಕುದುರೆ ಬೆನ್ನೊರಗಿದವನೇಳ್ವುದನೆ ಹಾರಿದನು ಭಟನು.

೪೮

ವರ್ಮಭೃತರಸುವಳ್ತಿಯನು ತೊರೆಯುತೊರೆದೆಗೆದ ಅಸಿಗಳಿಂದಿಭಗಳನು ಪ್ರೊಯ್ಯಲ್
ಆ ಬೃಹದ್‌ದಂತಗಳಿನೊಗೆವಗ್ನಿಗುರೆ ಬೆದರ್ದು ಕರಸೀಕರಂಗಳಿಂದಾರಿಸಿದುವಿಭಗಳ್.

೪೯

ಅಂಬಿನಿಂದೆಚ್ಚ ತಲೆ ಫಲವೆನಿಸೆ ಸೀಳಿದ ಶಿರಸ್ತ್ರಾಣ ಮಧುಪಾತ್ರೆಯೆನಿಸೆ
ಮೆರೆದತ್ತು ರಣಭೂಮಿ ಮೃತ್ಯುವಿನ ಪಾನಭೂಮಿಯವೋಲು ರುಧಿರ ಮಧುವೆನಿಸೆ.

೫೦

ಇರ್ಕಡೆಯೊಳುಂ ಬಿಡದೆ ಪರ್ದುಗಳ್ ಪರಿದಿರ್ದ ತೋಳುಗಳ ಹೆಣ್ಣುನರಿಯೆಳೆದು
ಮಾಂಸಾಶಿಯಿರ್ದುಮೀಡಾಡಿದುದು ಕೇಯೂರಕೋಟಿವಿಕ್ಷತತಾಲುವೆಂದು.

೫೧

ಒಡನೆ ಆ ಸುರವಿಮಾನವನೇರುತೆಡದೊಡೆಯ ಸುರತರುಣಿಯೊಡನಿರುವ ಭಟನು
ನೋಡಿದನು ಸಮರದೊಳು ನೃತ್ಯತ್‌ಕಬಂಧವನು ಅರಿಖಡ್ಗಭಿನ್ನಮಸ್ತಕನು.

೫೨

ಒಬ್ಬರೊಬ್ಬರ ಸೂತರನು ಕೊಂದು ತಾವೆ ತೇರನು ನಡಸಿ ಹಯಮುಮಳಿದಂದು
ಗದೆಗೊಂಡು ಸೆಣಸುತ್ತೆ ಗದೆ ಮುರಿಯೆ ಬಾಹುಯುದ್ಧಂಗೆಯ್ದರಿರ್ವರುಂ ಮುಳಿದು.

೫೩

ಪೆರತೆಡೆಯೊಳೋರೋರ್ವರೇರ್ವಡೆದು ಏಕಕಾಲದೊಳು ಕಡೆಯುಸಿರೆಳೆದು ಮಡಿದು
ಸುರಪದವಿಯನು ಪಡೆದು ಕಾದುತಿಹರೋರ್ವ ಸುರಯುವತಿಯನೆ ಇರ್ವರುಂ ಬಯಸಿ.

೫೪

ಇಂತುಭಯಸೈನ್ಯಮುಂ ಪಡೆದುದುದಂದನಿಯತಜಯಾಜಯವನೊಂದೊಂದರಿಂದೆ
ಹಿಂದಿನಿಂದಂತೆದುರಿನಿಂದೆದ್ದ ಬಿರುಗಾಳಿಗುಬ್ಬಿರುವ ಕಡಲಲೆಯ ತೆರದೆ.

೫೫

ನಿಜಬಲವು ಪರಬಲದಿನಳಿದರೂ ಆ ಮಹೋಜನು ಅಜನು ಕವಿದನಂದರಿಯ
ಹೊಗೆಯ ಹೊಡೆದೋಡಿಸಿದರೂ ಗಾಳಿ ಗರಿಕೆವುಲ್ಲ್ಗಳ ಬಳಿಯೊಳಗ್ನಿಯುರಿವಂತೆ.

೫೬

ಹತ್ತಿ ರಥವನು ಕವಚಚಾಪತೂಣೀರಧರನೇಕ್ಕೈಕ ವೀರನುದ್ಧತನು
ನೂಂಕಿದನು ನೃಪರನು ವರಾಹ ತಾಂ ನೂಂಕುವ್ರೊಲು ಕಲ್ಪಾಂತದಬ್ಧಿಯೂರ್ಮಿಯನು.

೫೭

ಆಜದೊಳು ಮೂಡಿಗೆಯೊಳಜನು ಬಲಗೈಯ ತಾನಿಟ್ಟುದೊಂದೇ ಕಾಂಬುದಂದು
ಅರಿವನಿರಿವಂಬುಗಳ ಯೋಧನಾ ನಾರಿ ದಲ್ ಪೆತ್ತವ್ರೋಲಿರ್ದನವನೆಸೆದು.

೫೮

ಮುಳಿದು ಕಡಿದರುಣಗೊಂಡೋಷ್ಠದೊಳು ಪುರ್ಬುಗಂಟಂದೆರ್ದ ಊರ್ಧ್ವರೇಖೆಯೊಳು
ಮೆರೆದು ಹೂಂಕರಿಸುವರಿಶಿರಗಳನು ಭಲ್ಲದಿಂದರಿದಿಳೆಯ ಮುಚ್ಚಿರ್ದನಜನು.

೫೯

ದ್ವಿರದಪ್ರಧಾನವಾದಾ ಸರ್ವಬಲನಿಂದು ಸರ್ವ ಪ್ರಯತ್ನಮಂಗೈದು
ಕಂಕಟವ ಭೇದಿಸುವ ಸರ್ವಾಯುಧಂಬಿಡಿದು ಸರ್ವನೃಪರಂದು.

೬೦

ರಿಪುಶಸ್ತ್ರಸಂಛನ್ನನಾದಜನು ಕೇತು ಮಾತ್ರದೊಳರಿಯುವಂತಾದನಲ್ತೆ
ಮಂಜಿನೊಳಗದ್ದಿರುವ ಪೊಳ್ತರೆಯ ರವಿಯ ನಸುವೆಳಗಿನಿಂದಿನಿಸರಿಯುವಂತೆ.

೬೧

ಕುಸುಮಾಸ್ತ್ರಕಾಂತನು ಕುಮಾರನಧಿರಾಜಪುತ್ರನು ಅಜನು ತಾನತಂದ್ರಿತನು
ಗಾಂಧರ್ವನಾಪ್ರಿಯಂವದನಿತ್ತ ಪ್ರಸ್ವಾಪನಾಸ್ತ್ರದಿಂದೆಚ್ಚನರಸರನು.

೬೨

ಹೆದೆಯನೆಳೆವೆಸಕದೊಳು ಕದಲದಿರೆ ತಮ್ಮ ಕೈ ಹೆಗಲಿನೊಳು ಸೀಸಕಗಳಿಳಿಯೆ
ನಿದ್ರಾವಿಧೇಯಮೆನೆ ಕೇತನಸ್ತಂಭದೊಳು ಮೈಕೆಡೆದುದಂತು ನರದೇವಬಲವು.

೬೩

ತನ್ನಿನಿಯೆ ರಸವೀಂಟದಿನಿದುಟಿಯೊಳಿಟ್ಟಜನು ಊದಿದನು ಬಳಿಕ ಜಲಜವನು
ಮೂರ್ತಿಮದ್ಯಶವನಂದಾಸ್ವಯಾರ್ಜಿತವ ತಾನೀಂಟುವ್ರೋಲೆಸೆದ ರಘುಸುತನು.

೬೪

ಶಂಖಸ್ವನಂಕೇಳ್ದು ಮರಳಿ ಬಂದಾ ಭಟರು ನಿದ್ರಿಸುವ ಶತ್ರುಗಳ ನಡುವೆ
ಮುಕುಳಿತಸರೋಜಮಧ್ಯದೊಳೆಸೆವ ಆ ಶಶಾಂಕಪ್ರತಿಮನನು ವೀಕ್ಷಿಸಿದರು.

೬೫

ರಾಘವನು ಯಶವನಪಹರಿಸಿದನು ದಯಗೈದು ನಿಮ್ಮನಿಂದುಳುಹಿದನು ಎಂದು
ನೆತ್ತರೊಳು ಅಂಬುದುದಿಯಿಂದಜನು ಬರೆಯಿಸಿದನರಸರಾ ಬಾವುಟದೊಳಂದು.

೬೬

ಬಿಲ್ದುದಿಯೊಳೊರ್ತೋಳನಿಟ್ಟವನು ಸೀಸಕವ ತೆಗೆದವನು ಶಿಖೆ ಬಿಚ್ಚಿದವನು
ಸೇದೆಯಿಂದೊಗೆದಿರುವ ಬೆಮರಹನಿ ಹಣೆಯ ಮೇಲಿಳಿದವನು ಬೆದರಿದಿನಿಯಳನು.

೬೭

ಮಕ್ಕಳುಂ ಕೈದುವೆಳೆವೋಲಿರುವ ಹಗೆಗಳನು ಅನುಮತಿಯನಿತ್ತಿಹೆನು ನೋಡು
ನನ್ನ ಕೈವಶ ನಿನ್ನನೀ ಬಗೆಯ ಚೇಷ್ಟೆಯಿಂದೆಳಸಿದರು ವೈದರ್ಭಿ ಎಂದು;

೬೮

ಪೇಳ್ದೊಡನೆ ತಿಳಿಯಾದುದವಳ ಮೊಗ ಹಣೆಯಿಂದಲೊಗೆದ ದಂದುಗವುಳಿಯಲಂದು
ಕನ್ನಡಿಯೊಳುಸಿರ ಬಿಸಿಯಾರಿದೊಡನೆಸೆಯುವೊಲು ಅದು ತನ್ನ ನಿಜಕಾಂತಿ ತಳೆದು.

೬೯

ನಲವನಾಂತರು ನಾಚಿ ಬಳಿಯ ಕೆಳದಿಯ ನುಡಿಯಿನೊಲವರವ ಸಲೆ ಸೂಚಿಸಿದಳು
ಹೊಸಮಳೆಗೆ ನಲಿಯುವಿಳೆ ಮೋಡವನು ನವಿಲುಗಳ ಕೇಕೆಯೊಳು ಹೊಗಳುವಂತವಳು.

೭೦

ದೋಷರಹಿತನಿಂತು ನೃಪರ ತಲೆಯ ಮೇಲೆ ವಾಮಪಾದವಿಳುಹುತೆ
ದೋಷರಹಿತೆ ಇಂದುಮತಿಯನೊಯ್ದನವನು ಮೋದದಿಂದ ನಲಿಯುತೆ
ತೇರ ಕುದುರೆಯಿಂದಲೆದ್ದ ಧೂಳು ಮುಂಗುರುಳನು ಮುಸುಕುಗೊಳಿಸಿರೆ
ಮೂರ್ತಿಮಂತ ಸಮರಲಕ್ಷ್ಮಿಯೆನುವ ತೆರದೊಳಾಕೆ ನೋಡಲೆಸೆದಿರೆ.

೭೧

ಆನಿತುಮುದನು ಮುನ್ನಮರಿತ ರಘುನೃಪಾಲನಾತನು
ಶ್ಲಾಘ್ಯಜಾಯೆಯೊಡನೆ ಬಂದ ವಿಜಯಿಯಜನ ಪ್ರೋಗಳ್ದನು
ಬಳಿಯ ಹೊರೆಯನವನೊಳಿಳುಹಿ ತಪಕೆ ನಡೆಯಲಿರ್ದನು
ಸೂರ್ಯಕುಲಜರಿರರು ಮನೆಯೊಳಿರೆ ಸುಧೀರ ಪುತ್ರನು.

## ಎಂಟನೆಯ ಸರ್ಗ

# ಅಜವಿಲಾಪ

೧

ಲಲಿತವೈವಾಹಕೌತುಕವನಾಂತಜನ ಕೈಗಳಲಿ ತಾನೊಸೆದು
ರಘುವರನು ವಸುಧೆಯುಮನಿರಿಸಿದನು ಅಪರೇಂದುಮತಿಯವೋಲಂದು.

೨

ನೃಪಕುಮಾರಕರು ದುರಿತಾದಿಗಳಿನಾವುದನು ತಮ್ಮದಾಗಿಪರು
ಅಯ್ಯನಾಣತಿಯಿಂದಲದನಜನು ತಾಳಿದನು ಭೋಗೇಚ್ಛೆಗಲ್ತು.

೩

ಗುರು ವಸಿಷ್ಠನು ನೆಗಳ್ದ ಸಲಿಲದ ಸಹಾಭಿಷೇಚನದೆ ಮುದವಡುತೆ
ಮೇದಿನಿ ಕೃತಾರ್ಥತೆಯ ಕಥಿಯಿಪಂತೆಸೆದಳಂದಾ ಸಿತೋಚ್ಛ್ವಸಿತೆ.

೪

ಗುರುವಥರ್ವಜ್ಞಕೃತವಿಧಿಗಳಿಂದರಿದುರಾಸದನಾದನಜನು
ಬ್ರಹ್ಮತೇಜಂಬೆರೆದ ಕ್ಷಾತ್ರಮನಲಾನಿಲನ ಯೋಗ ದಲ್ ತಾನು.

೫

ಜನರರಿತರಾ ದೊರೆಯ ಮರಳಿ ಹರಯಂಬೆತ್ತ ರಘುನೃಪನೆ ಎಂದು
ಸಿರಿಯೊಂದನೆಯೆ ಕೊಳದೆ ಸಕಲಾನುಗುಣಗಳನುಮಜನಾಂತನೆಂದು.

೬

ಶುಭಕರಗಳಾಯೆರಡರೊಡವೆರೆದು ಆ ದ್ವಿತಯ ಪಿರಿದೆನಿಸಿತಂದು
ಜಾನಕಶ್ರೀಯುಜನವೆರೆದವನ ನವಯೌವನವ ವಿನಯುವೆರೆದು.

೭

ಬಲಕೆ ಬೆದರುವಳೆಂದು ದಯದಿನನುಭವಿಸಿದನು ಆ ಮಹಾಭುಜನು
ಅಚಿರೋಪಗತೆಯ ಮೇದಿನಿಯನು ನವ್ರೋಢಾಂಗನೆಯ ತೆರದೊಳಜನು.

೮

ನಾನೊರ್ವನೆಯೆ ಮಾನ್ಯನರಸಗೆಂದೆಲ್ಲರುಂ ಭಾವಿಸಿದರಂದು
ನೂರಾರು ಹೊಳೆಗಳನು ಕಡಲೆಂತು ಅಂತು ತಾನೊಳಕೊಂಡನೊಲಿದು.

೯

ಅತಿತೀಕ್ಷ್ಣಮೃದುತೆಗಳನುಳಿದು ಪವಮಾನನು ಮಹೀರುಹನನೆಂತು
ಮುರಿಯದೆಯೆ ಮಣಿಯಿಸಿದನರಸರನು ಮಧ್ಯಮಕ್ರಮವನೊಲಿದಂತು.

೧೦

ನಿರ್ವಿಕಾರದೊಳಮಾತ್ಯಾದಿಗಳಲಾತ್ಮಜನು ನೆಲೆಗೊಂಡನೆಂದು
ನೋಡಿ ರಘು ನಶ್ವರದ ನಾಕವಿಷಯಂಗಳಲಿ ಸ್ಪೃಹೆಯಳಿದನಂದು.

೧೧

ಮುಪ್ಪಿನೊಳು ರಾಜ್ಯವನು ಸುಗುಣಿಸುತಗೊಪ್ಪಿಸಿ ದಿಲೀಪವಂಶಜರು
ತರುಚೀರದುಡೆಯವರು ಸಂಯಮಿಯ ಪಥವಿಡಿದು ನಡೆಯಲಿಹರವರು.

೧೨

ಅಡವಿಗೆಂದೈದಲಿರುವಯ್ಯನಡಿಗಳಲಜನು ಚೆಲುವು ಮುಡಿ ಮಣಿದು
ತನ್ನನುಳಿದೈದುವುದು ಬೇಡೆಂದು ಬೇಡಿದನು ಮಗನವನ ತಡೆದು.

೧೩

ಕಂಬನಿಯ ಮೊಗದಜನ ಕೋರಿಕೆಯ ಸಲಿಸಿದನು ಮಗನನೊಲಿದವನು
ಪಾವುಳಿದ ಪೊರೆಯವೊಲು ತಾನಾಂತುದಿಲ್ಲವನು ಸಿರಿಯನುಳಿದುದನು.

೧೪

ರಘುವಿರ್ದನೂರಹೊರವಲಯದೊಳು ನಾಲ್ಕನೆಯ ಆಶ್ರಮಂಬಿಡಿದು
ಸೊಸೆಯಂತೆ ಸುತಭೋಗ್ಯಲಕ್ಷ್ಮಿಯಿನುಪಾಸಿತನು ಜಿತಕರಣನಂದು.

೧೫

ಶಮಯುತನು ಹಿಂದಣರಸರ ಜೊತೆಯೊಳೇಳಿಗೆಯ ಹೊಸದೊರೆಯನಾಂತು
ಮುಳುಗುತಿಹ ತಿಂಗಳನು ಮೂಡುತಿಹ ನೇಸರನು ತಳೆದ ಬಾನೆಂತು
ಬಳಿಯಂತು.

೧೬
ಜತಿಯ ಅರಸೊತ್ತಿಗೆಯ ಕುರುಹು ತಳೆದವರ ರಘುರಾಘವರ ಜನರು
ನೆಲಕಿಳಿದ ಧರ್ಮದಾ ಮೋಕ್ಷ ಮೇಣ್ ಅಭ್ಯುದಯ ಫಲಗಳೆನುತಿಹರು.

೧೭
ನೀತಿವಿದ ಮಂತ್ರಿಗಳನ್ನೈದಿದನು ಅಜಿತಪದಲಾಭಕೆಂದಜನು
ಅನಪಾಯಿಪದಪಡೆಯಲೈದಿದನು ರಘುವಾಪ್ತಯೋಗಿಜನಗಳನು.

೧೮
ಹರೆಯದರಸೇರಿದನು ವ್ಯವಹಾರಪೀಠವನು ಜನಮನವನರಿಯೆ
ಕುಶಪೂತಪೀಠವನು ಮುದಿಯರಸನೇರಿದನು ಬಗೆಯ ಬಿಗಿವಿಡಿಯೆ.

೧೯
ಪ್ರಭುಶಕ್ತಿಯಿಂದೊಬ್ಬನಂದು ವಶಗೊಳಿಸಿದನು ಬಳಿಯ ದೊರೆಗಳನು
ಪ್ರಣಿಧಾನದಿಂದೊಬ್ಬನಂದು ವಶಗೊಳಸಿದನು ಐಗಾಳಿಗಳನು.

೨೦
ಅವನಿಯೊಳು ಹಗೆಯರಸರೆಸಕವನು ಹೊಸ ಅರಸು ಬೂದಿಮಾಡಿದನು
ತಿಳಿವೆಂಬ ಬೆಂಕಿಯೊಳು ಮತ್ತೊಬ್ಬನುರುಹಿದನು ಕೃತಕರ್ಮಗಳನು.

೨೧
ಸಂಧ್ಯಾದಿ ಷಡ್ಗುಣವ ಬಳಸಿದನು ಅಜನು ತತ್ಫಲವ ತಾನರಿತು
ತ್ರಿಗುಣಗಳ ಮೆಟ್ಟಿದನು ಹೊನ್ನು ಮಣ್ಣುಗಳು ಸಮವೆಂದು ರಘುವರಿತು.

೨೨
ಫಲಸಿದ್ಧಿ ಪಡೆವವರ ಮಧ್ಯತನು ಸುಸ್ಥಿರನು ಬಿಡನು ಕರ್ಮವನು
ಯೋಗವನು ಪರಮಾತ್ಮದರ್ಶನಂಬರಮುಳಿಯನಾ ಸನಾತನನು.

೨೩
ಜಾಗೃತರು ದುರಿತದೆಡೆಗೆಳೆಯಲಿರುವರಿಗಳನುಮಿಂದ್ರಿಯಂಗಳನು
ಉದಯಾಪವರ್ಗರತರೆಳೆದಾಂತರಾಯಿರ್ವರುಭಯಸಿದ್ಧಿಯನು.

೨೪

ಸಮದರ್ಶಿ ರಘು ಬಳಿಕ ಅಜನೆಳಸಿದೊಲು ಹಲವು ಬರಿಸಗಳ ಕಳೆದು
ಯೋಗದ ಸಮಾಧಿಯಿಂದೈದಿದನು ನಿರ್ಮಾಯ ನಿತ್ಯ ಪುರುಷನನು.

೨೫

ಅಯ್ಯ ವೈಯಳಿದನೆಂದೆನುವುದನು ಕೇಳ್ದಜನು ಅದ್ದು ದುಗುಡದೊಳು
ಅನಲರಹಿತಾಂತ್ಯ ವಿಧಿಯೆಸಗಿದನು ಯತಿವೆರಸು ವಿಧ್ಯುಕ್ತಮೆನಲು.

೨೬

ಪಿತೃಕಾರ್ಯಕಲ್ಪಜ್ಞನೆಸಗಿದನು ಭಕ್ತಿಯಿಂದೌರ್ಧ್ವದೈಹಿಕವ
ಅಣುಗರ್ಕರೀವ ಪಿಂಡವನೆಳಸರಾತೆರದೊಳೆಸೆದವರು ತನುವ.

೨೭

ಮೋಕ್ಷವಡೆದಯ್ಯನನು ತಗದು ಕುರಿತಳುವುದೆಂದರ್ಥವಿದರೊರೆಯೆ
ಕೊರಗನುಳಿದಿಳೆಯ ಮಾರಾಣತಿಯನಡಗಿಸಿದನವನೆಳೆದು ಹೆದೆಯ.

೨೮

ನಲಿನಲಿದು ಇಳೆ ಇಂದುಮತಿಯರ್ಕಳಂದು ಪಡೆದಗ್ರ್ಯಪೌರುಷನ
ಧರಣಿ ಬಹುರತ್ನಸೂಯೆನಿಸಿದಳು ರಾಣಿ ಹೆತ್ತಳು ವೀರಸುತನ.

೨೯

ದ್ಯುತಿಯುತನು ದಶರಶ್ಮಿಶತನಂತೆ ಯಶದಿಂದೆದಶದಿಶೆಯೊಳೆಸೆವ
ದಶಶಿರಾರಿಯ ಜನಕನಹ ಮಗುವ, ದಶರಥನು ಎಂದರಾ ಬುಧರು.

೩೦

ಋಷಿದೇವಪಿತೃಋಣವನಧ್ಯಯನಯಾಗಸಂತಾನಂಗಳಿಂದೆ
ತೀರ್ಚಿಸುತೆ ಮುಕ್ತನೃಪನೆಸೆದನಾ ಪರಿವೇಷಮುಕ್ತಾರ್ಕನಂತೆ.

೩೧

ಸಂದಿತೆನೆ ವಿದ್ಯೆ ಬುಧಸೇವೆಯೊಳು ಬಲಮಾರ್ತಭಯಸಂಹೃತಿಯೊಳು
ವಸುಮಾತ್ರಮಲ್ತು ಜನ ಗುಣಮುಮಿತರೋಪಕೃತಿಗೆಂದಿರ್ದುದಲ್ತೆ.

೩೨

ಸುಪ್ರಜನು ತತ್‌ಪ್ರಜಾಪ್ರಿಯನಜನು ಜಾಯೆವೆರಸುಪವನದೊಳಂದು
ಶಚಿವೆರಸು ನಂದನದೊಳಮರೇಂದ್ರನೆಂತಂತು ವಿಹರಿಸಿದನೊಲಿದು.

೩೩

ಇತ್ತ ತೆಂಕಣಕಡಲತಡಿಯ ಗೋಕರ್ಣದೊಳು ನೆಲಸಿದೀಶ್ವರನ ಮುಂದೆ
ನಾರದನು ವೀಣೆಯನು ನುಡಿಸಲೆಂದೈತರಲು ಸುರಮಾರ್ಗದಿಂದೆ.

೩೪

ಮುನಿಯ ವೀಣೆಯ ತುದಿಯ ದೇವಸುಮ ಮಾಲೆಯನು ನೋಡಿ ತಾಂ ಮುದದೆ
ಸೌರಭಸ್ಪೃಹನೆನಲು ಬೀಸಿಬಂದನಿಲನಪಹರಿಸಿದನು ಭರದೆ.

೩೫

ಅಲರಬಳಿ ಸುತ್ತುವಳಿ ಬಳಸಿಬರೆ ಪವನವಂಚಿತೆ ವೀಣೆ ನೊಂದು
ಕಾಡಿಗೆಯಿನೊಡವೆರೆದ ಕಂಬನಿಯ ಸುರಿಸುವೊಲು ತಾಂ ತೋರ್ದುದಂದು.

೩೬

ಮಧುಗಂಧದತಿಶಯದೊಳುಪವನದ ವೀರುಧೆಗಳೈಸಿರಿಯ ಹಳಿದು
ಅಜನ ದಯಿತಾಮಣಿಯ ಕುಚಚೂಚುಕಾಂತರವ ಸುಮ ಸಾರ್ದುದಂದು.

೩೭

ಕೊಡವೊಲೆಯ ಅರೆಚಣದ ಕೆಳದಿಯನು ನೋಡಿ ಪರವಶತೆಯೊಳು ಕುಸಿದು
ರಾಹುವಗಿದಿಂದುವಿನ ಜೊನ್ನದೊಲು ಮುಚ್ಚಿದಳು ಕಂಗಳನು ಕಾಂತೆ.

೩೮

ಕರಣಂಗಳುಡುಗುತಿರಬೊರಗಿದೊಡಲುರುಳಿಸಿದುದೆರೆಯನುಮನಂದು
ಪಂಜಿನಿಂದಿಳಿದುಬರುವೆಣ್ಣೆಹನಿಯುರಿಯುಮನ್ನಿಳೆಗೆರಗಿಪಂತೆ.

೩೯

ತಾವರೆಯ ಹೂಗೊಳದ ಹಕ್ಕಿಗಳು ಸಮದುಃಖವಾಂತವೋಲಂದು
ಸತಿಪತಿಯರನುಚರರ ತುಮುಲಾರ್ತರವದಿಂದೆ ಚೀರಿದವು ಸುಗಿದು.

೪೦

ವ್ಯಜನಾದಿಸಾಧನದೊಳೆಚ್ಚತ್ತನವನಿಪನು ಸತಿಯಿರ್ದಳಂತೆ
ಫಲಿಸುವುವು ಪ್ರತಿಕಾರಸಾಧನಗಳಿರ್ದೊಡಾಯುಶ್ಶೇಷಮಲ್ತೆ.

೪೧

ಕೈಗಳಿಂದಂಗನೆಯನಂಕದೊಳು ತಳೆದನು ನಿತಾಂತವತ್ಸಲನು
ತಂತಿಗಳನಳವಡಿಸದಿರುವ ವೀಣೆಯೊಲಿರುವ ಸತ್ವಹೀನಳನು.

೪೨

ಕರಣಗಳ ಬಲವಳಿದು ಬಣ್ಣಗೆಟ್ಟಿರುವಳನು ತೊಡೆಯೊಳಾಂತಜನು
ತೇಜಗೆಟ್ಟಿರಳೆಕುರುಹಾಂತಿರುವ ಪ್ರೊಳ್ತರೆಯ ಪೆರೆಯವೋಲಿಹನು.

೪೩

ವಿಲಪಿಸಿದನವನಿಪನು ಬಾಷ್ಪಗದ್ಗದವೆರೆದು ನಿಜಧೈರ್ಯವುಳಿದು
ಕಾಯಿಸಲು ಮೃದುವಹುದು ಕಬ್ಬೊನ್ನುಮೆಂದೆನಲು ನರರ ಪಾಡೇನು !

೪೪

ಮೈಯ ಸೋಂಕಿನೊಳಿಂತು ಹೂವುಮಿರದಾಯುವನು ಸೆಳೆವುದೆನಲಕಟ
ಕೊಲ್ಲಲೆಳಸಿದ ವಿಧಿಯ ಕೈಯೊಳಾವುದು ತಾನೆ ಕೈದೆನಿಸದಿಹುದೊ !

೪೫

ಕೊಲುವನಹುದಂತಕನು ಮೃದುಳವಸ್ತುಗಳಿಂದೆ ಮೃದುವಸ್ತುಗಳನು
ನಲಿನಿಯನು ಮಂಜುವನಿ ನಲುಗಿಸುವುದಿದೆ ಪೂರ್ವದೃಷ್ಟಾಂತವಹುದು.

೪೬

ಹಾರವಿದು ಹರಣಾಪಹಾರಿಯೆನಲೇಕೆನ್ನನಿಂತಿರಿಯದಿಹುದು
ಹರನಿಚ್ಛೆಯಿಂದಮೃತ ವಿಷಮಹುದು ವಿಷವಮೃತವಹುದು.

೪೭

ನನ್ನೊಂದು ದೌರ್ಭಾಗ್ಯದಿಂದಿದನು ವಿಧಿಯೆಸೆದನಶನಿಯೆನಲಿಂತು
ಅಲ್ಲದೊಡೆ ತರುವ ಸುಡದದನಪ್ಪಿದೆಳಲತೆಯ ತಾಂ ಸುಡುವುದೆಂತು.

೪೮

ಮಿತಿಯಿಲ್ಲದಪರಾಧಮೆಸಗಿರ್ದುಮೆನ್ನನು ತಿರಸ್ಕರಿಸದವಳೆ
ಈ ನಿರಪರಾಧಿಯನು ನುಡಿಸುವುದಕರ್ಹನಲ್ಲೆಂದೆಣಿಸಬಹುದೆ !

೪೯

ಕಪಟವತ್ಸಲನು ಶಠನಿವನು ಎಂದರಿತೆ ದಲ್ ಹೇ ಧವಲಹಸಿತೆ
ಹಿಂದಿರುಗಿ ಬರದಿರುವ ಪರಲೋಕಕ್ಕೈದಿರುವೆ ನನಗೊರೆಯದಂತೆ.

೫೦

ದಯಿತೆಯನು ಅನುಸರಿಸುತ್ತೈದಿದಿದು ಮರಳಿತೇಕಿಂತವಳನುಳಿದು
ನಿನ್ನ ದುಶ್ಚೇಷ್ಟಿತದ ಅಳಲನೆಲೆ ಹತಜೀವ ಅನುಭವಿಸು ಇಂದು.

೫೧

ಸುರತದಾಯಾಸದೀ ಬೆಮರಹನಿಯಿನ್ನುಮಿಹುದಿದೊ ನಿನ್ನ ಮೊಗದೆ
ನೀನೊ ಅಸ್ತಮಿಸಿರುವೆ ದೇಹಿಗಳಸಾರತೆಗೆ ಧಿಕ್ಕಾರ ಜಗದೆ.

೫೨

ನೆನಹಿನೊಳಮೆಸಗಿದವನಲ್ಲ ನಾ ತಪ್ಪುಗಳನೆನಲೇಕೆ ತೊರೆದೆ
ಹೆಸರಿಗಿಳೆಗರಸನಾನಾಗಿರುವೆ ನಿನ್ನೊಳೇ ಮನದೆರಕ ಮುಗುದೆ.

೫೩

ಹೂಮುಡಿದ ಅಳಿಹೊಳಹಿನಲೆದೆಸೆವ ಸುಳಿಸುಳಿಯ ಮುಂಗುರಳನಿಂದು
ಚಲಿಸುತೆಲರೊಗೆಯಿಪುದು ಮರಳಿ ಬಹೆ ನೀನೆಂಬ ಬಗೆಯ ಬಯಕೆಯನು.

೫೪

ಅಂತೆ ನೀನೆಳ್ಚರುತೆ ಎದೆಯಳಲನೊಡನೆ ಪರಿಹರಿಪುದೌ ಇನಿಯೆ
ಮಂಜುವೆಟ್ಟದ ಗವಿಯ ಕತ್ತಲೆಯ ಚೆದುರಿಸುವೊಲೋಷಧಿಯ ಬೆಳಕು.

೫೫

ಮುಂಗುರುಳು ಕವಿದ ಮೊಗ ನುಡಿಗೊಡದ ಕತದಿಂದಲೆನ್ನನುರಿಸುವುದು
ಉಲಿಯದಳಿಯೊಳಗಿರಲು ಮುಗಿದೊಂಟಿ ತಾವರೆಯ ಕಂಡವೋಲಿಂದು.

೫೬

ನಿಶಿ ಶಶಿಯನೆಣೆವಕ್ಕಿ ದಯಿತೆಯನು ಮರಳಿ ಬೆರೆದಪವೆನುವ ಕತದೆ
ಸಹಿಸಿದಪವಗಲಿಕೆಯನೆನೆ ಮತ್ತೆ ಬಾರದಗಲಿಕೆ ನನ್ನ ಸುಡದೆ !

೫೭

ಚೆಂದಳಿರ ಹಾಸುಗೆಯೊಳಾದರೂ ಮೃದುದೇಹ ನೋವುದೆನುವವಳು
ತಾಳಬಹುದೆಂತು ಹೇಳಾ ಚಿತಾರೋಹಣವ ನವುರು ಮೈಯವಳು.

೫೮

ಮೊದಲಿನ ರಹಃಸಖಿವೊಲಿಹ ರಶನೆ ವಿಭ್ರಮುವನುಳಿದು ದನಿ ನಿಂದು
ಎಚ್ಚರಿರದೊರಗಿರುವ ನಿನ್ನವೋಲಿದುವುಮಸು ತೊರೆದವ್ರೋಲಿಹುದು.

೫೯

ಅಂಚೆಯೊಳು ಮೆಲುನಡೆಯನೆರಳೆಯೊಳು ನೋಟವನು ಪಿಕದೊಳಿನಿದನಿಯ
ತಂಬೆಲರ ತೀಟದಲಿ ತೊನೆವ ತೆಳುಬಳ್ಳಿಯಲಿ ನಿನ್ನ ಸೂಗುರಿಯ

೬೦

ನಾಕಗಮನೋತ್ಸಾಹವಿದ್ದರೂ ನನಗಾಗಿ ಸುಗುಣಗಳನಿಂತು
ನಿಲಿಸಿದೊಡಮಿವು ತಾಳಲರಿದಪ್ಪವಗಲಿಕೆಯೊಳೆನ್ನ ಬೆಂದೆದೆಯ.

೬೧

ನೀನೆ ದಲ್ ಸಹಕಾರ ಫಲಿನಿಗಳನಿಂತೊಂದುಗೂಡಿಸಿದೆ ಚೆನ್ನೆ
ಮದುವೆಯೊಸಗೆಯನೆಸಗದಿಂತು ನೀಂ ಮರಳುವುದು ತಗದು ಮನದನ್ನೆ.

೬೨

ನೀನೆ ದೋಹದವೆಸಗಿದಸುಗೆಯಿದು ಬೆಸಲೆಯೆನಲೆಸಳುಗಳನಂತು
ತುರುಬಿನೊಳು ಮುಡಿಯಿಸಿದೆ ಮತ್ತಿನ ನಿವಾಪಮಾಲೆಯ ರಚಿಪೆನೆಂತು.

೬೩

ಬೇರೆಯವರಿಗೆ ದೊರೆಯದೆನುವಡಿಯ ಸವಿದನಿಯ ನೇವುರವ ನೆನೆದು
ಅಲರುಗಂಬನಿಮಳೆಯ ಸುರಿದಸುಗೆಯಳುವಂತೆ ತೋರುತಿಹುದಿಂದು.

೬೪
ನಿನ್ನ ಸಿರ ಪರಿಮಳದ ಬಕುಳಗಳನೆನ್ನೊಡನೆ ನೀನುಮರೆಕೋದು
ರಶನೆಯನು ಮುಗಿಸದೆಯೆ ಇಂತು ಕಿನ್ನರಕಂಠಿ ಮಲಗಿರುವೆ ನಿದ್ದೆಗೈದು.

೬೫
ಸಮದುಃಖಸುಖಶೀಲರಾಳಿಯರು ಪಾಡಿವದ ಸಸಿಯವೊಲು ಮಗನು
ನಾನೇಕರಸನಪ್ಪೆನಾದರೂ ನೀಂಗೈದೆ ಕಟ್ಟೆಸಕವಿದನು.

೬೬
ಧೃತಿಯುಡುಗಿರತಿಯಡಗಿ ಋತು ನಿರುತ್ಸವಮಿಂದು ಸಂಗೀತ ನಿಂದು
ಗತಿಸಿರ್ದುದಾಭರಣದತಿಸೊಗಸು ಶಯನವೇ ಪರಿಶೂನ್ಯವಿಂದು.

೬೭
ಗೃಹಿಣಿ ಮೇಣ್ ಮಂತ್ರಿ ಮೇಣಾಪ್ತ ಸಖಿ ಮೇಣ್ ಲಲಿತಕಲೆ ಕಲಿವ ಶಿಷ್ಯೆ
ನಿಷ್ಕರುಣಿ ಮೃತ್ಯುತಾ ನಿನ್ನನಪಹರಿಸುತೆನಗೇನುಳಿಸಿತಿಂದು.

೬೮
ಮದಿರಾಕ್ಷಿ ಸವಿದಿಲ್ಲಿ ಬಾಯೊಳಾನೂಡುತಿರುವಿನಿಗಳ್ಳ ರುಚಿಯ
ಪರದೊಳೆಂತಲ್ಲಿ ನೀಂ ಕುಡಿದಪೌ ಬಾಷ್ಪದೂಷಿತಜಲಾಂಜಲಿಯ.

೬೯
ನೀನಿಲ್ಲದೈಶ್ವರ್ಯವಿದ್ದರೂ ಗಣಿಸೆನ್ನ ಸುಖ ಮುಗಿದುದೆಂದು
ಸಿಲುಕದೆ ವಿಲೋಭನಾಂತರಕಖಿಳಸುಖ ನಿನ್ನ ಜೊತೆಗಳಿದುದಿಂದು.

೭೦
ಪರಿಪರಿಯೊಳಿನ್ನಿಯಳಿನು ನೆನೆದಿಂತು ಕರುಣಾರ್ಥಸಂಕಲಿತನೃಪನು
ಹರೆಗಳಿಂದುದುರಿಪಂತೆಸಗಿದನು ಮರಗಳು ಮರಂದಬಾಷ್ಪವನು.

೭೧
ಬಂಧುಜನ ಬಳಿಕೆಂತೊ ಸುಂದರಿಯನಿಳಿಯಿಸುತಲವನ ತೊಡೆಯಿಂದೆ
ಮಾಲಾಂತ್ಯಮಂಡನೆಯನಿರಿಸಿದರು ಅಗರುಚಂದನಚಿತಾಗ್ನಿಯೊಳು.

೭೨

ತಿಳಿವಿದ್ದುಮಸುದೊರೆದನಳಲಿನಿಂದಿನಿಯಳೊಡನೆನುವ ಪಳಿಗಂಜಿ
ಇನಿಯಳೊಡನುರಿವೊಗದೆ ನಿಂದನಜನುಳಿವಾಸೆಯಿಂದಲೇನಲ್ತು.

೭೩

ಪತ್ತು ದಿನಗಳ ಬಳಿಕ ಗುಣಶೇಷಳಾದಿನಿಯಳಂತ್ಯಕರ್ಮವನು
ಪುರವನದೊಳೆಸಗಿದನು ವಿಧ್ಯುಕ್ತ ವೈಭವದೆ ಶಾಸ್ತ್ರಜ್ಞನಜನು.

೭೪

ನಗರಕ್ಕೈತಂದನವನಿನಿಯಳನು ಬಿಟ್ಟಿರುಳನುಳಿದಿಂದುವೆನಲು
ಹೊನಲಿಟ್ಟುದನು ಕಂಡನಜನಳಲು ಪುರವಧೂವದನಬಾಷ್ಪದೊಲು.

೭೫

ಅಜನು ಅಭಿಷಂಗಜಿತನೆನುವುದನು ಆಶ್ರಮದ ಸವನದೀಕ್ಷಿತನು
ಪ್ರಣಿಧಾನದಿಂದರಿದು ಬೋಧಿಸಲ್ಕಟ್ಟಿದನು ಶಿಷ್ಯನೊರ್ವನನು.

೭೬

ತಾಪಕಾರಣವ ಗುರುವರಿತರೂ ಕ್ರಮ ಮುಗಿಯದಿರುವೊಂದು ಕತದೆ
ಪ್ರಕೃತಿಯೊಳು ಮರಳಿಯುಂ ನಿನ್ನ ನೆಲೆಗೊಳಿಸಲ್ಕೆ ತಾನೆ ಬರದಿಹನು.

೭೭

ಕೆಲನುಡಿಯೊಳಣಿಗೊಳಿಸಿದವರ ಸಂದೇಶವನು ತಂದಿಹೆನು ನಾನು
ಚಿತ್ತದೊಳು ಧರಿಪುದಯ್ ಕೇಳ್ದು ವಿಶ್ರುತ ಸತ್ವಸಾರ ನೀನದನು.

೭೮

ಜನಿಯಿರದ ಪುರುಷನಡಿಮೂರರೊಳು ಅಳತೆಗೊಂಡೀಜಗತ್ರಯದೆ
ದಿವ್ಯಚಕ್ಷುವಿನರಿವನಂದಿಂದುಮುಂದಿನದನೆಲ್ಲವನು ಭರದೆ.

೭೯

ಹಿಂದೆ ದುಷ್ಕರವೆನಿಪ ತಪದೊಳಿರೆ ತೃಣಬಿಂದು ಭೀತವಾಸವನು
ಯೋಜಿಸಿದನಳಿಯಿಸೆ ಸಮಾಧಿಯನು ದೇವಾಂಗನೆಯನು ಹರಿಣಿಯನು.

೮೦

ಶಮವೇಲೆಯಿಂದೊಗೆದ ವಿಲಯೋರ್ಮಿಯೆನೆ ತಪಃಪ್ರತಿಬಂಧಮನ್ಯ
ವಿಂದವನು
ಬಿನ್ನಾಣವನು ಮೆರೆಯುವಂಗನೆಯ ಶಪಿಸಿದನು ನೀಂ ಮನುಜಳಾಗಿಳೆ
ಯೊಳೆಂದು.

೮೧

ನಾಂ ಪರಾಧೀನೆ ಗಡ! ಪರಮಾಪರಾಧವನು ಮನ್ನಿಸೈ ಭಗವನ್
ಎಂದವಳೊಳಮರಸುಮದರ್ಶನಂಬರದ ಮನುಜತೆಯನೆಸಗಿರ್ದನ್.

೮೨

ಕ್ರಥಕೈಶಿಕಾನ್ವಯದೊಳೊಗೆದವಳು ನಿನ್ನ ಪಟ್ಟದ ಮಹಿಷಿಯಾದಳ್
ಶಾಪದ ನಿವೃತ್ತಿಕಾರಣವ ಪಡೆದಾದಿವಶ್ಚ್ಯುತವನಸುದೊರೆದಳ್.

೮೩

ಅಂತೆ ಅಜ ತದಪಾಯಚಿಂತೆಗಳನುಳಿವುದಯ್ ಸಿದ್ಧಮೀ ಜನಿಗಳ್
ವಸುಧೆಯನು ಮತ್ತೆ ಪರಿಪಾಲಿಸಯ್ ನೃಪರು ದಲ್ ಧರಣೀಕಳತ್ರರ್.

೮೪

ಮದನಿಂದೆಗೆಡೆಗೊಡದೊಲುದಯದೊಳು ಸುವಿವೇಕವಾವುದನು ಮೆರೆದೆ
ಎದೆಗೆಡದೆ ತೋರದನು ಚಿತ್ತಸಂಜನಿತ ತಾಪಜ್ವರದೊಳಿರದೆ.

೮೫

ಅತ್ತರೇನವಳು ಮತ್ತೆ ಮೃತಹಳೆ ಅಸುವಳಿದರೇಂ ಮರಳಿ ಬಹಳೆ
ಭಿನ್ನಪಥವಿಡಿಯುವರು ಅವರವರ ಕರ್ಮದಂತತ್ತನಡೆದವರು.

೮೬

ಮನದಳಲನಿರದುಳಿದು ತಣಿಸು ಪಿಂಡೋದಕಾದಿಗಳಿನಿನಿಯಳನು
ನಂಟರಿಂದನವರತಮಿಳಿವ ಕಂಬನಿ ಸುಡುಗುಮೆಂಬರಳಿದರನು.

೮೭

ಪ್ರಕೃತಿ ದೇಹಿಗೆ ಸಾವು ಜೀವಿತವೆ ವಿಕೃತಿಯೆಂದೊರೆದಪರು ಬುಧರು
ಕ್ಷಣಕಾಲವಾದರೂ ಉಸಿರಾಡುವಾತನೆಯೆ ದಲ್ ಲಾಭಯುತನು.

೮೮

ಪ್ರಿಯರಳಿವು ಹೃದಯದೊಳು ನಾಟಿರುವ ಶಲ್ಯವೆಂದರಿವರರಿಯದರು
ಮಂಗಳದ್ವಾರಕೆಂದುರ್ಚಿರುವ ಮುಳ್ಳು ಎಂದರಿವರರಿತವರು.

೮೯

ತನ್ನೊಡಲು ಆತ್ಮಗಳೆ ಒಂದನೊಂದಗಲುವುವು ಎನುವುದನು ತಿಳಿದು
ಬಾಹ್ಯವಿಷಯಂಗಳಗಲಿಕೆಗಳುವುದುಂಟೆ ಹೇಳರಿತ ಬುಧಜನರು.

೯೦

ಓ ಜಿತೇಂದ್ರಿಯವರ್ಯ ಅಜ್ಞರೊಲು ಮರುಗುವುದು ತಗದು ನೀನಿಂತು
ಎರಡುಮಿಂದೆಲರಿಗಿರದಲುಗುವೊಡೆ ಗಿರಿತರುಗಳಂತರಮದೆಂತು !

೯೧

ಬೀಳ್ಕೊಟ್ಟನಂತಾಗಲೆಂದವನುದಾರಮತಿಯೊರೆದುದನು ಕೇಳ್ದು
ಅಳಲಿಡಿದ ಬಗೆಯನೊಳವುಗದವುಗಳೈದಿದವೊಲಾಯ್ತು ಗುರುವೆಡೆಯ.

೯೨

ಮಗನೆಳೆಯನೆಂದೆಂತೊ ಕಳೆದನೆಣ್ಬರಿಸಗಳ ದಿಟನುಡಿಯಿನೆಸೆಯುತಿರುವಜನು
ಸತಿಯೆಣೆಯ ಪಟದೊಂದು ನೋಟದೊಳು ಕನಸಿನೊಳು ಚಣದ ಕೂಟದೊಳು.

೯೩

ಪ್ಲಕ್ಷದೊಂದು ವೊಳಕೆಯೆಂತು ಸೌಧತಲವನೊಡೆವುದಂತು
ಶೋಕಶಂಕು ಬಲದಿನೊಡೆದುದಜನ ಧೀರಮನವನು.
ಭಿಷಜವರರಿಗರಿದಿದೆನುವ ಜೀವವನ್ನೆ ತೆಗೆವ ರುಜೆಯ
ನಲ್ಲೆಯಿಡೆಯನ್ನೈದಿಪೊಂದು ವರವಿದೆಂದೆ ಬಗೆದನು.

೯೪

ವರ್ಮಧರನನಣುಗನನು ಸಮ್ಯಗ್ವಿನೀತನನು
ವಿಧ್ಯುಕ್ತ ರೀತಿಯಿಂದಿರಿಸಿ ರಾಜ್ಯದೊಳು
ರೋಗೋಪಹತತನುವ ತವಿಸುತಂದವನಿಪನು
ಪ್ರಾಯೋಪವೇಶವನು ಕೊಂಡನು ಮುಮುಕ್ಷು.

೯೫

ಸರಯುಗಂಗಾಸಂಗಮಸ್ಥಾನದೊಳು ವ್ಮೈಯನು ತೊರೆಯುತೆ
ಅಮರಗಣಸಂದೋಹದಳು ಸುರರೂಪಿನಿಂದಜನೆಸೆಯುತೆ
ಮೊದಲಿನಿಂದತ್ಯಧಿಕಕಾಂತಿಯಿನೆಸೆವ ಕಾಂತೆಯ ಪಡೆದನು
ಮರಳಿ ನಂದನದೆಡೆಯ ಲೀಲಾಗಾರದೊಳು ರಮಿಸಿರ್ದನು.

---

## ಒಂಭತ್ತನೆಯ ಸರ್ಗ

# ಮೃಗಯಾ ವರ್ಣನ

೧

ಮುನಿಪರಗ್ರೇಸರನು ಜನಪರ ಧುರಂಧರನು
ತಂದೆ ಬಳಿಕುತ್ತರದ ಕೋಸಲದ ತಿರೆಯ
ಸಂಯಮಜಿತೇಂದ್ರಿಯನು ದಶರಥಮಹಾರಥನು
ಆಳ್ದನಂದನುಭವಿಸುತದರೊಂದು ಸಿರಿಯ.

೨

ಅನ್ವಯಾಗತಮೆನಿಪ ನಗರವನು ರಾಷ್ಟ್ರವನು
ಧರ್ಮದಿಂದಗರಂಧ್ರಕರತೇಜನೊಲಿದು
ಆಳುತಿರಲಾನಗರರಾಷ್ಟ್ರಂಗಳಿಂದವನು
ಮೊದಲಿಗಿಂತುತ್ಕರ್ಷವಡೆದೆಸೆದನಂದು.

೩

ದಂಡಧರ ಮನುವಿನನ್ವಯದೊಳೊಗೆದರ್ಥಪತಿ
ಮೇಣ್ ಬಲಾಸುರನ ಕೊಂದಮರರ ಪತಿ
ಸಮಯವರ್ಷಿಗಳೆನಿಸಿದಿರ್ವರೆಯೆ ಕಳೆದಪರು
ಕೃತಕರ್ಮಜನದಳಲನೆಂದಪರು ಬುಧರು.

೪

ಶಮರತನು ಸುರತೇಜನಾಳುತಿರಲಜಸುತನು
ಮಳೆಬೆಳೆಗಳಿಂದಲಿಳೆಯೊಪ್ಪಿದುದು ನಲಿದು
ರೋಗರುಜಿನಾದಿಗಳಿಗೆಡೆಯಿಲ್ಲವೆಂದೆನಲು
ಹಗೆಪಡೆಯ ದಾಳಿಯಳಲಿರುವುದಿನ್ನೆಂತು.

೫

ದಶದಿಕ್ಕುಗಳ ಗೆಲಿದ ರಘುರಾಜನಿಂದೆಂತು
ಅವನ ಬಳಿಕಜಮಹಾರಾಜನಿಂದೆಂತು
ಮಹಿಯಂತಹೀನವಿಕ್ರಮಿನೃಪನನಿಂದಾಂತು
ಶೋಭಿಸುತಲಿರ್ದುದಹ ಮರಳಿಯು ಸಮಂತು.

೬

ಸಮತೆಯೊಳು ಧನಕನಕವೃಷ್ಟಿಯೊಳು ದುಷ್ಟಜನ
ಶಿಕ್ಷೆಯೊಳು ಕಾಂತಿಯೊಳು ತನ್ನರಾಧಿಪನು
ಯಮನನು ಕುಬೇರನನು ವರುಣನನು ಸೂರ್ಯನನು
ದಶರಥನು ಪರಿವಿಡಿಯೊಳನುಕರಿಸುತಿಹನು.

೭

ನವಯೌವನಂಬಡೆದ ಹಾವಭಾವದ ವಧುವು
ಜೂಜು ಮೇಣ್ ಬೇಂಟೆ ಮೇಣ್ ಶಶಿಸದೃಶ ಮಧುವು
ನಿರುತಮಭ್ಯುದಯಕುದ್ಯೋಗಿಸುತಲಿರುವನನು
ಬಗೆಕದಡುವಂತೆಳೆಯಲಾರ್ತುದಿಲ್ಲಂದು.

೮

ಇಂದ್ರನೆದುರಾದರೂ ಕೃಪಣತೆಯ ತೋರಿಸನು
ಪರಿಹಾಸಕಾದರೂ ನುಡಿಯನನೃತವನು
ಅರಿಕುಲದೊಳಾದರೂ ಪರುಷಾಕ್ಷರಂಗಳನು
ತಾನೆಂದುಮಾಡದಿಹನಾ ರಘೂದ್ವಹನು.

೯

ಆ ರಘೂದ್ವಹನಿಂದಲುದಯ ಮೇಣಸ್ತವನು
ಸಾಮಂತವಸುಧೇಶರನುಭವಿಸುತಿಹರು
ತನ್ನಾಣೆ ಮೀರದರಿಗವನನಹನು ಸುಹೃದಯನು
ಮೀರಿದರಿಗವನಿಪನಯೋಹೃದಯನಹನು.

೧೦

ಶರಧಿವೇಷ್ಟಿತ ಧರೆಯ ಹೆದೆಯನೇರಿಸುತವನು
ಏಕರಥದಿಂಗೆಲ್ದನಂದು ದಶರಥನು
ಜವತೀವ್ರಹಯಮುಯುದ ಗಜವತೀ ಸೇನೆಯದು
ಬರಿದೆ ಜಯದುದ್ಘೋಷಕೆಂದಿರ್ದುದಹುದು.

೧೧

ಗುಪ್ತಿಯಿರುವೇಕರಥದಿಂದಲವನೀಶ್ವರನು
ಧನುವಿಡಿದು ಜಯಿಸಿರಲ್ಕವನಿಯೆಲ್ಲವನು
ನರವಾಹನಂಗೆಣೆಯ ಸಿರಿಯೊಡೆಯಗನಿಸಿದುದು
ಘನರವಾರ್ಣವವು ಜಯಭೇರಿವೋಲಂದು.

೧೨

ಬೆಟ್ಟಗಳೆರಂಕೆಗಳ ತರಿದಳವನಳಿಸಿದನು
ಶತಕೋಟಿಕುಲಿಶದಿಂದಾ ಪುರಂದರನು
ಬಾಣಗಳ ಮಳೆಗರೆವ ಬಿಲ್ವಿಡಿದು ದಶರಥನು
ಅರಿಪಕ್ಷವಳಿಸಿಹನು ಸರಸಿಜಾನನನು.

೧೩

ದಶರಥನ ಚರಣನಖರುಚಿಯಿನುತ್ಕರ್ಷವನು
ತಳೆದಿಹ ಕಿರೀಟಮಣಿಕಿರಣಗಳಿನಂದು
ಸೋಂಕಿದರಖಂಡಪೌರುಷನಡಿಯ ನೂರಾರು
ಧರಣಿಪರು, ಶತಮುಖನಿಗೆರಗುವೊಲು ಸುರರು.

೧೪

ಸಚಿವರಾದೇಶದಿಂದಣುಗರ್ಕಳಂಜಲಿಯ
ಮುಗಿಯಲಂದವನಿಪನು ತೋರುತ್ತೆ ದಯೆಯ
ಶೂನ್ಯಾಲಕೆಯರನರಿವೆಂಡಿರನು ಮನ್ನಿಸುತೆ
ಅಬ್ಧಿತಟದಿಂಸಾರ್ದನಲಕೆಗೆಣೆಪುರಿಯ.

೧೫

ಈರಾರುಮಂಡಲಗಳೊಡೆತನವನಾಂತವನು
ಹೆರರಿಗರಿದಪ್ಪ ಬೆಳ್ಗೊಡೆಯನಾಂತವನು
ತಾನಿರ್ದನನಲಸನು ಅನಲಸೋಮಪ್ರಭನು
ದೋಷವಿನಿಸಿರ್ದರುಂ ಸಿರಿ ಪ್ರೋಪಳೆಂದು.

೧೬

ಬೇಳ್ಪರೊಳು ಮೊಗದಿರುಹದಿನಕುಲದೊಳೊಗೆದನನು
ಮೇಣಾತ್ಮಭವನೆನುವ ಪುರುಷನೊರ್ವನನು
ಕಮಲಧೃತೆ ಭಾಗ್ಯದೇವತೆ ಪತಿವ್ರತೆ ತಾನು
ಸೇವಿಸಿದಳುಳಿದನ್ಯನೃಪರ ಸೇವೆಯನು.

೧೭

ಮಗಧ ಕೋಸಲ ಕೇಕಯಾಧಿಪರ ಪುತ್ರಿಯರು
ಪತಿಯೆ ಪರದೈವವೆಂದರಿತ ಕುವರಿಯರು
ಶರಜಿತಾರಾತಿಯಾದಾತನನು ವರಿಸಿದರು
ಆಗಜನಿತನದಿಗಳಂಬುಧಿಯನೆಂತಂತು.

೧೮

ತನ್ನ ನಚ್ಚಿನ ಮೂವರರಸಿತಿಯರೊಡವೆರೆದು
ಅರಿವಿಜಯಸದುಪಾಯನಾರಘೂದ್ವಹನು
ಜನರ ಶಿಕ್ಷಿಸಲೆಂದು ಶಕ್ತಿತ್ರಯಾನ್ವಿತನು
ದೇವೇಂದ್ರನಿಳೆಗಿಳಿದವೋಲೆಸೆಯುತಿಹನು.

೧೯

ಸಂಗ್ರಾಮಭೂಮಿಯೊಳು ನೆರವನಿಂದ್ರನಿಗಿತ್ತು
ಉರೆ ಬೆದರಿದಮರಿಯರಿಗಾ ಮಹಾರಥನು
ತನ್ನ ಮಾರ್ಗಣದಿಂದಲಭಯವನು ಒಡನಿತ್ತು
ಅವರಿಂದೆ ಹಾಡಿಸಿದನಾತ್ಮಶೌರ್ಯವನು.

೨೦

ದಿಕ್ಕುದಿಕ್ಕಿನ ಸಿರಿಯ ಭುಜಬಲದೊಳೊಟ್ಟೈಸಿ
ಯಜ್ಞದೊಳು ತಲೆಯ ಮಕುಟವನು ತೆಗೆದಿರಿಸಿ
ಅಜಿನವನು ತೊಟ್ಟವನು ದಂಡವನು ಪಿಡಿದವನು
ಕನಕಮಯಯೂಪಗಳ ನೆಟ್ಟು ಬೆಳಗಿದನು.

೨೧

ಅಜಿನವನು ತೊಟ್ಟವನು ದಂಡವನು ಪಿಡಿದವನು
ಎರಳೆಗೊಂಬಾಂತವನು ಮೋನಮಿರುವವನು
ಶರಮೌಂಜಿಯಾಂತವನು ತನ್ನೊಳಿರ್ದೀಶ್ವರನು
ಬೆಳಗಿಸಿರಲೆಸೆದನಾ ಯಜ್ಞದೀಕ್ಷಿತನು.

೨೨

ಸುರಸಭಾಧಿಷ್ಠಾನಕರ್ಹತೆಯ ಪಡೆದವನು
ಅವಭೃತಸ್ನಾನಶುದ್ಧನು ಜಿತೇಂದ್ರಿಯನು
ಎತ್ತರದ ತಲೆಬಾಗಿ ನಮಿಸಿದಪನವನಿಪನು
ಮಳೆಗರೆವ ನಮುಚಾರಿಯೋರ್ವನನು ತಾನು.

೨೩

ಹರಿಹಯಾಗ್ರೇಸರನು ಚಾಪಧೃತ ದಶರಥನು
ವೀರವರನೆನಿತೊ ಸೂಳಾ ಏಕರಥನು
ರವಿಬಿಂಬವನು ಕವಿವ ರಣರಜವನಳಿಸಿದನು
ಸುರಶತ್ರುಜನರೆದೆಯ ರುಧಿರಜಲದಿಂದೆ.

೨೪

ಯಮ ಧನದ ವರುಣಾಮರೇಂದ್ರನಿಭ ಭಾರನನು
ನುತವೀರವರನನು ನರಾಧೀಶ್ವರನನು
ಪೊಸಪೂಗಳರ್ಚನೆಯಿನೋಲೈಸಲೆನಲಂದು
ಮಾಧವನು ಮೈತಳೆದು ಬಂದಿಳಿದನೊಲಿದು.

೨೫

ಧನಪ ನೆಲಸಿರುವೆಡೆಯ ತೆರಳಲೆಳಸಿದ ರವಿಯು
ಕುದುರೆಯನು ತಿರುಗಿಸಿರೆ ತನ್ನ ಸಾರಥಿಯು
ಕವಿದ ಹಿಮುವನು ಕಳೆದು ಹೊಳೆಯಿಸುತ ಉದಯವನು
ತ್ಯಜಿಸಿದನು ತಾನಂದು ಮಲಯವನು ಭಾನು.

೨೬

ಮೊದಲು ಹೂವರಳಿದುದು ಬಳಿಕ ಎಲೆ ಚಿಗುರಿದುದು
ದನಿಗೈದುದಳಿವೊರೆದ ಬಳಿಕ ಪಿಕಮುಲಿದು
ದ್ರುಮವತಿ ವನಸ್ಥಲಿಯೊಳೀಕ್ರಮುದೊಳೈತಂದು
ತೋರಿದನು ಮಾಧವನು ಮೈತಳೆದು ನಲಿದು.

೨೭

ಸತ್ಕಾರ್ಯಗಳಿಗೆಂದು ನಯದೆ ಗಳಿಸಿದ ಸಿರಿಯ
ಎಳಸಿ ಬಂದಡರುವ್ರೊಲು ಯಾಚಕರು ದೊರೆಯ
ದುಂಬಿ ನೀರ್ವಕ್ಕಿಗಳು ತಿಳಿಗೊಳದ ತಾವರೆಯ
ಮುತ್ತಿದವು ತಾವ್ರೊಲಿದು ಚೈತ್ರಪಾಲಿತೆಯ.

೨೮

ಆರ್ತವನವಾಶೋಕತರು ಕುಸುಮ ಮಾತ್ರದೊಳು
ಮನ್ಮಥೋದ್ದೀಪನಂ ತಮುಗಾದುದಲ್ತು
ರಸಿಕರನು ಮದಗೊಳಿಸುವಿನಿಯರವತಂಸದೊಳು–
ಮಂಗಜೋದ್ದೀಪನಂ ತಮುಗಾದುದಂತು.

೨೯

ವನಲಕ್ಷ್ಮಿಯಂಗದೊಳು ನವಪತ್ರವಿರಚನೆಯ
ಮಾಧವನು ನೆಗಳ್ದವ್ರೊಲು ಕುರುಬಕದ್ರುಮವು
ಮಧುಪಾನ ಶಾಂತತೆಯೊಳಳಿತತಿಯ ಹೊಗಳಿಕೆಯ
ನುಚ್ಚರಕೆ ತಾನಾದುದಂದು ಕಾರಣವು.

೩೦

ಚೆಲುಮೊಗದ ನಾರಿಯರ ಮೊಗಗಳ್ಗಳಿಂದೊಗೆದು
ಅದರೆಣೆಯ ನರುಗಂಪಿನೆಲರಿನ ತೊಡಂಬೆ
ಬಿರಿಬಿರಿದು ಬಕುಳವನು ಬವಳಿಗೊಳಿಸಿತ್ತಂದು
ಬಂಡುಣುವ ದುಂಬಿವಿಂಡೈತಂದು ತುಂಬೆ.

೩೧

ಲಜ್ಜೆಯನು ತೊರೆದು ಸತಿ ಪತಿಯೊಡಲೊಳೊತ್ತಿರುವ
ಉಗುರುಗಳ ಕೆಂಗಾಯದಂದದೊಳು ಮೆರೆದು
ಬನಲಕುಮಿಯೊಡರಿಸಿದ ಮುತ್ತುಗದ ನಸುಬಿರಿವ
ಮುಗುಳುಗಳು ತೋರುವುವು ಕೆಂಪು ತಳೆದಿಂದು.

೩೨

ಕೆಳದುಟಿಯ ಗಾಯಕತಿಕಠಿಣವಾಗಿರ್ದುದನು
ಕಟಿಯ ರಶನೆಯ ನೂಂಕಿ ತೊರೆಯಿಸಿರ್ದುದನು
ನಿಶ್ಶೇಷಮೆನೆ ಕಳೆವುದರಿದೆನಿಪ್ಪೈಕಿಲನು
ತಗ್ಗಿಸುತಲಿನಿಸು ರವಿ ವಿರಳಗೊಳಿಸಿದನು.

೩೩

ಅಭಿನಯವ ಕಲಿಯುವೊಂದುದ್ಯಮದೊಳಿಹುದೆನಲು
ಮಲಯದೆಲರೆಳೆದಳಿರನಲುಗಿಸುತಲಿರಲು
ಪೊಚ್ಚಪೊಸ ನನೆಕೊನೆಯ ಮಾವಿನೆಳೆಸಸಿಯೊಂದು
ಕಲಿಕಾಮಜಿತರನೂ ಮುದಗೊಳಿಪುದಿಂದು.

೩೪

ಬಿರಿದರಳ ಕಂಪಿನೊಳು ಮಘಮಘಿಪ ಬನಗಳೊಳು
ನಡುನಡುವೆ ಆಗಾಗ ಆ ಕೋಗಿಲೆಗಳು
ಮೊಟ್ಟ ಮೊದಲಿಂಚರವನುಲಿದವಾಮೋದದೊಳು
ಮುಗದೆ ತಾನೊಂದೊಂದೆ ನುಡಿ ನುಡಿಯುವೋಲು.

೩೫

ಕಿವಿಗೆ ಸೊದೆಗರೆವಳಿಯ ಮೊರೆಯೆ ಗಾಯನವೆನಲು
ನಳನಳಿಸುವಲರುಗಳೆ ಸುಲಿಪಲ್ಗಳೆನಲು
ತೆಳುಗಾಳಿಗಿನಿಸಲಗುವೆಳದಳಿರೆ ಬೆರಳೆನಲು
ಬಳ್ಳಿಯಿವೆ ಲಯವೆರೆದು ಕುಣಿದಪವೊ ಎನಲು.

೩೬

ಲಲಿತತರವಿಭ್ರಮವಿಚಕ್ಷಣತೆಯಾಂತುದನು
ಗಂಧದೊಳು ಬಕುಳವನು ಹಳಿವುದೆನುವುದನು
ಅಂಗಜನ ಕೆಳೆಯೆನಿಪ ಮಧ್ಯವನು ತಾನೊಲಿದು
ಕಾಂತರಿರದೀಂಟಿದರು ಕಾಂತೆಯರ ಬೆರೆದು.

೩೭

ಮದಕಲೋದಕಲೋಲ ವಿಹಗಂಗಳೊಡವೆರೆದು
ಅರಳಿದರವಿಂದಂಗಳಿಂದೆ ಸಲೆ ಮೆರೆದು
ಕೊಳಗಳನುಕರಿಸುತಿವೆ ಮೆಲ್ಲುಲಿಯ ಮೇಖಲೆಯ
ಚೆಲುವು ಮೊಗದೆಳನಗೆಯ ಕಾಮಿನಿಯ ಪರಿಯ.

೩೮

ತಣ್ಗದಿರನುದಯದೊಳು ಬೆಳ್ಪಡರಲಾನನವು
ಚೈತ್ರ ಖಂಡಿತೆಯೆನಿಪ ಯಾಮಿನೀವನಿತೆ
ಪ್ರಿಯನ ಸಂಗಮಸುಖವನನುಭವಿಸದಿಹ ದಯಿತೆ
ಯಂದದೊಳು ತೋರುವಳು ಬಡವಾದಳೆನುತೆ.

೩೯

ಮಂಜು ಹರಿದುದರಿಂದಲಮಿತಕಾಂತಿಯು ತಳೆದು
ಸುರತಸಂಗಮಪರಿಶ್ರಮುವನೊಡನಳಿದು
ಮೆರೆವ ಕಿರಣಂಗಳಿಂ ಕೀಸಿದನು ಹಿಮಕರನು
ಮಕರಕೇತನನೆಸೆಯಲರಲಂಬುಗಳನು.

೪೦

ಹುತಹುತಾಶನನಂತೆ ಕಾಂತಿಯನು ತಳೆದಿರುವ
ವನರಮೆಯ ಪೊಂದೊಡಿಗೆಯಂತೆಸೆಯುತಿರುವ
ಮೃದುದಲದ ಕೇಸರದ ನವಕರ್ಣಿಕಾರವನು
ಮಡದಿಯರು ಮುಡಿಗಿಟ್ಟರಿನಿಯರಿತ್ತುದನು.

೪೧

ಕಾಡಿಗೆಯ ಕಣೆಯವೊಲು ಚೆಲುವುವಡೆದಲರೋಳಿ-
ಗೆರಗುವಳಿ ಮುತ್ತಿರುವ ತಿಲಕ ತರುವು
ವನಲಕ್ಷ್ಮಿಗತಿಶಯದ ಚೆಲುವನೆಸಗಿದುದಂದು
ತಿಲಕಮುಬಲಾಜನಕೆ ಚೆಲುವನಿತ್ತವೊಲು.

೪೨

ಹೂವುಗಳೆ ನಗೆಯೆನಲು ಚಿಗುರೆಲೆಯೆ ತುಟಿಯೆನಲು
ನರುಗಂಪನುಗುವ ಮಧು ಮದಿರೆ ತಾನೆನಲು
ಮಲ್ಲಿಗೆಯ ಹೂಬಳ್ಳಿ ತರುವಿಲಾಸಿನಿಯೆನಲು
ನೋಳ್ಪವರ ಚೇತನಕೆ ಮುದವೀಯುತಿಹಳು.

೪೩

ಕಿವಿಯ ಯವದಂಕುರವು ಪರಪುಟ್ಟನಾರವವು
ಅರುಣರುಚಿಯನು ಭರದೆ ಗೆಲ್ಲುವಂಬರವು
ಎನುವನಂಗನ ಬಲವು ತರುಣಿಯರ ಬೆಂಬಲವು
ದೊರೆತು ಸುಖಿಯಪ್ಪವೋಲೆಸಗಿದುದು ಜನವು.

೪೪

ಬೆಳ್ಳನೆಯ ಕಣಗಳಿಂದುಬ್ಬಿ ಬಿರಿದರಳಿರುವ
ತಿಲಕಜಂಗಳಿಗಳಿಗಳುರೆ ಮುತ್ತಿದಂದು
ಅಲಕದೊಳು ಮುತ್ತುಗಳ ಜಾಲಕವ ಕೋದಿರುವ
ಬೈತಲೆಯ ಮಾಳ್ಕೆಯೊಳು ತಾನೆಸೆಯುತಿಹುದು.

೪೫

ಕರದೆ ಬಿಲ್ಪಿಡಿದು ಬರುವಂಗಜನ ಗುಡಿಯೆನಲು
ಮಧುರಮೆಯ ಪ್ರೋಗರುಗುವ ಮೊಗದ ಹುಡಿಯೆನಲು
ಉಪವನದಿನ್ನೈತರುವ ಪವನನಿಂದೆದ್ದಿರುವ
ಹೂಹುಡಿಯೊಳೋಡುತಿದೆ ಅದೊ ದುಂಬಿವಿಂಡು.

೪೬

ಮಧುಮಾಸದುತ್ಸವದೊಳಾಡುತುಯ್ಯಾಲೆಯನು
ಅದರೊಳತಿಜಾಣ್ಮೆ ತಮಗಿರ್ದುಮವರು
ಮಣಿಯ ಹಗ್ಗವ ಹಿಡಿದ ನಳಿತೋಳಿನಬಲೆಯರು
ಕೈ ಸಡಿಲಗೊಳಿಸಿದರು ತಬ್ಬಲಿನಿಯರನು.

೪೭

ಸಾಕು ಬಿಡಿ ಮಾನವನು ನಿಲ್ಲಿಸಿರಿ ಜಗಳವನು
ಸಂದ ಪಟುಯೌವನವು ಮರಳಿಬರದೆಂದು
ಕೋಗಿಲೆಗಳಂಗಜನ ಮತವನೊರೆದಪವೆನಲು
ರಮಿಸಿದರು ರಮಣಿಯರ ರಮಣರೊಡವೆರೆದು.

೪೮

ಮನದಣಿಯುವನ್ನೆವರಮಾತ್ರೋತ್ಸವಂಗಳನು
ಭೋಗಿಸಿದನಿಂತವನು ಕಾಮಿನೀಸಖನು
ಆಬಳಿಕ ಬೇಂಟೆಯನು ಬಯಸಿದನು ಮಧುನಿಭನು
ಮಧುಮದನಸನ್ನಿಭನು ಮನ್ಮಥೋಪಮನು.

೪೯

ಚಲಲಕ್ಷ್ಯಪಾತನಾಭ್ಯಾಸವನು ದೊರಕಿಪುದು
ಮೃಗತತಿಯ ಭಯರೋಷದರಿವುಮೆಮಗಹುದು
ಅಂಗಬಲಗೊಳ್ಳುವುದು ಸೇದೆಯೂ ಕಳೆದಪುದು
ಬೇಂಟೆಯಿಂದೆನೆ ಸಚಿವರರಸನ್ನೈದಿದನು.

೫೦

ತಳೆದು ಮೃಗಯಾವಿಹಾರಾನುಗುಣವೇಷವನು
ವಿಪುಳಗಳಲಗ್ನಧನು ರಾಜನ್ಯರಿನನು
ಅಶ್ವಖುರದಿಂದೆದ್ದ ರಜದೊಳು ವಿತಾನವನು
ಆಗಸಕೊಡರ್ಚುತಂದೈದಿದನು ನೃಪನು.

೫೧

ಮರಗಿಡಗಳೆಲೆಬಣ್ಣದಂಗಿಯನು ತೊಟ್ಟವನು
ಬನದಲರ ಹಾರದೊಳು ಮುಡಿಕಟ್ಟಿದವನು
ಕುದುರೆ ನೆಗೆತಕೆ ಒಲಿವ ಮಕರಕುಂಡಲದವನು
ರುರುವಾಸಭೂಮಿಗಂದೈತಂದನವನು.

೫೨

ತೆಳ್ಳನೆಯ ಬಳ್ಳಿಯೊಳು ಮೈಯನವಿತಿರಿಸಿದರು
ನೋಟದೊಂದೆಸಕವನು ಅಳಿಯೊಳಿರಿಸಿದರು
ಬಳಿಕ ವನದೇವಿಯರು ದಾರಿಯೊಳು ನೋಡಿದರು
ನಯನಸಂತೋಷಿತೇಶ್ವರನನಂದವರು.

೫೩

ಬಲೆ ನಾಯ್ಗಳನು ಪಿಡಿದು ಮೊದಲೆ ಬಿಯದರು ನಡೆದು
ಚೋರಾಗ್ನಿರಹಿತಮೆನೆ ಬನವನವರಂದು
ನೀರು ನಡೆಗಳ ನೋಡಿ ವಾಜಿಗಮನಕೆ ಸವೆದು
ಅಣಿಗೊಳಿಸಿದಡವಿಯನು ಹೊಕ್ಕನವನಿಪನು.

೫೪

ಜ್ಯಾರವದೆ ಕೇಸರಿಯ ಕೆರಳಿಸುವ ನರವರನು
ಧರಿಸಿದನು ಧನುವನು ಅನಾಥಿದಶರಥನು
ಚಿನ್ನದೊಲು ತಳತಳನೆ ಹೊಳೆವ ಮಿಂಚಿನ ಹೆದೆಯ
ಹನಿಗಣೆಯ ಮಳೆಬಿಲ್ಲನಾನುಪೊಲು ನಭನು.

೫೫

ತಾಯ ಮೊಲೆಯನು ಕುಡಿಯಲೆಳಸುತೆ
ಕಾಲುಗಳಿಗಡಿಗಡಿಗೆ ತೊಡರುತೆ
ನಡಿಗೆಯನು ಸಲೆ ತಡೆಯುತ್ತೈತರೆ ಹಿಂದೆ ಮರಿವಿಂಡು
ಕೆಲವು ಕುಶಸೂಚಿಯನು ಮೆಲುತಿರೆ
ಮುಂದೆ ಕೊಬ್ಬಿದ ಕೃಷ್ಣಮೃಗವಿರೆ
ಮೆರೆವ ಹುಲ್ಲೆಯ ಹಿಂಡನೊಂದನು ನಲಿದು ದೊರೆ ಕಂಡು.

೫೬

ಜವನ ವಾಜಿಯನೇರಿದರಸನು
ಬತ್ತಳಿಕೆಯಿಂದಂಬನೆಳೆದನು
ಏಣವೃಂದವನಟ್ಟಬಂದನು ಎನ್ನುವನಿತರೊಳು
ಹಿರಿದ ಜಿಂಕೆಗಳಶ್ರುದೃಷ್ಟಿಯೊ
ಳಡವಿಯೊಡಲನು ಕಪ್ಪುಗೈದವು
ಪವನಕಂಪಿತಕುವಲಯಂಗಳ ದಳಗಳಂದದೊಳು.

೫೭

ಒಡ್ಡಿ ಸಹಚರಿಯೊಂದು ಮೈಯನು
ತಾನು ಗುರಿಯಿಟ್ಟಿರಳೆಯೊಡಲನು
ಪ್ರೇಮವಶದಿಂದೊಡನೆ ಮರೆಗೈದುದನು ಕಂಡವನು
ತಾನುವೊಲವೆಯ ಬಲ್ಲ ಕತದಿಂ
ದಾಂತು ಮರುಕುವ ತೊಟ್ಟ ಬಾಣವ
ಕಿವಿಯವರೆಗೆಳೆದಿರುವ ಹೆದೆಯಿಂದಿಳುಹಿದನು ನೃಪನು.

೫೮

ಅನ್ಯಮೃಗಗಳಿಗಂಬನೆಸೆಯುವ
ಪೇಕ್ಷೆಯಿದ್ದರು ಕಿವಿಯವರೆಗೆಳೆ
ದಿದ್ದ ದಶರಥನೃಪನ ತದ್ದೃಢಮುಷ್ಟಿ ತಾನೇ ಬಿರ್ಚಿತು
ಭೀತ ತರಳಾಕ್ಷಿಗಳ ಚೆಲುವನು
ನೋಡಿ ನೆನೆದನು ಆ ನರೇಂದ್ರನು
ಪ್ರೌಢಕಾಂತಾನಯನವಿಭ್ರಮಚೇಷ್ಟಿತಂಗಳನು.

೫೯
ಬಳಿಕಲವನಿಪನತ್ತ ಹಿಡಿದನು
ಕೆಸರು ಕೊಳವನು ತೊರೆದು ಭರದೊಳು
ಭಯದಿನೋಡುವ ಕಾಡುಹಂದಿಗಳೈದಿದಧ್ವವನು
ಸೇದೆಯಿಂ ಬಾಯ್ದೆರೆಯಲುದುರಿರು
ವೆಳೆಯ ಮುಸ್ತೆಯ ಕಬಳತತಿಯನು
ನಾಂದ ನಿಡುಹೆಜ್ಜೆಗಳ ಕುರುಪನು ಮೆರೆಯುವಧ್ವವನು.

೬೦
ಕುದುರೆಯತ್ತಣಿನೊಡಲನಿನಿಸಾ
ನಿಸುತಲವನಿಪನೆಕ್ಕಲಂಗಳ
ನಿಸುವ ಸಮಯಕೆ ಕೆದರಿ ಕಣೆಯನು ಎಗರಲೆಂದಿರಲು
ತಾವು ನೆಮ್ಮಿದ ಮರಕೆ ತಮ್ಮಾ
ಪೃಷ್ಠಭಾಗಗಳಂಟಿಕೊಂಡುದ
ನೆಂತು ತಿಳಿದಪುವೆಚ್ಚಕಣೆ ಚುರ್ಚಿರಿಯಲವುಗಳ ಮೈಯನು.

೬೧
ಜವದೆ ಮೈಮೇಲೆಗರಲೈತಹ
ಕಾಡುಕೋಣನ ಕಣ್ಣತೂಂತನು
ಲಕ್ಷ್ಯಗೈದಾಶುಗವನೊಂದನು ಎಳೆದು ಬಿಟ್ಟನು ಭೂಪನು
ಅದರ ನೆತ್ತರಕೆಸರನಂಟಿಸಿ
ಕೊಳದೆ ದೇಹವ ಹೊಕ್ಕುಹೊಮ್ಮಿತು
ಜಡಿದು ಕೋಣನ ಮೊದಲು ಕೆಡುಹಿತು ಬಳಿಕ ಕಣೆ ತಾನುರುಳಿತು.

೬೨
ಹರಿತವಾಗಿರುವಂಬನೆಸೆದನು
ಖಡ್ಗಮೃಗಗಳ ಕೊಂಬನಿರಿದನು
ಕಡಿದು ಕಡುಹೊರೆಗಳೆದು ತಲೆಗಳ ಹಗುರಗೈದನು ಅರಸನು
ದುಷ್ಟನಿಗ್ರಹದೆಸಕದಾತನು
ಪರರ ಹೆಮ್ಮೆಯ ಮುರಿವನಲ್ಲದೆ
ಮುರಿವನೇನವನೆಂದುಮುವರಾ ಜೀವದಾಸೆಯನು.

೬೩

ಪವನಹತಿಯೊಳು ಮುರಿದ ಸರ್ಜದ
ಹೂವುತುಂಬಿದ ಹರೆಯವೋಲಿಹ
ಹುಲಿಗಳೆದುರಿಗೆ ಗವಿಯಮನೆಯಿಂದೆದ್ದು ಬರುತಿರಲು
ಹಸ್ತಲಾಘವದೊಂದು ಚಾತುರ್ಯಯೊ
ಳಳುಕದರಸನು ನಿಮಿಷಮಾತ್ರದೆ
ಹುಲಿಯ ಬಾಯನು ದೊಣೆಯಗೈದನು ತುಂಬಿ ಕಣೆಗಳನು.

೬೪

ವೀರ್ಯದೊಂದುತ್ಕರ್ಷದಿಂದಿವು ತಳೆದವಹ ಮೃಗ
ರಾಜಶಬ್ದವನೆಂದಸೂಯೆಯನಾಂತೊಲು
ಬಾನೊಳೊಗೆದುತ್ಪಾತಶಬ್ದದೊಲೆಸೆವ ಭೀಕರ
ಮೆನುವ ನಿಜಟಂಕಾರದಿಂದಿಳೆಯರಸನು
ಗಿರಿಗುಹಾಂತರದೆಡೆಯೊಳಿರ್ದಾ ಕುಂಜಲೀನೋ
ದಗ್ರಸಿಂಹಂಗಳನು ಕೊಲಲೆಳಸಿರ್ದನು.

೬೫

ಬದ್ಧವೈರದೊಳಾನೆವಿಂಡನು
ತರಿದು ತಮ್ಮಾ ಕುಟಿಲನಖದೊಳು
ಮುತ್ತುಗಳ ಸಲೆ ತಳೆದ ಹರಿಗಳ ಕೊಂದು ದಶರಥನು
ರಣದೆ ಗೈದುಪಕೃತಿಯ ನೆನೆಯುತ
ಲದನು ಕಣೆಗಳಿನಂದು ತೀರ್ಚುತ
ಋಣವಿಮುಕ್ತನವೋಲು ತನ್ನನು ನರಪನೆಣಿಸಿದನು.

೬೬

ಹಯವನು ಭರದಿಂದೋಡಿಸಿ ಕೆಲವೆಡೆಯೊಳು ಚಮರಿಗಳನು ಬಳಸಿ
ಅರಿರಾಜರಿಗೆಸಗಿದವೊಲು ಕಿವಿವರಮೆಳೆದಂಬಿನ ಮಳೆ ಸುರಿಸಿ
ಬಿಳಿಬಾಲದ ಚಾಮರವನು ದಶರಥನೃಪನೊಡನೆಯೆ ಕತ್ತರಿಸಿ
ಬೇಂಟೆಯೊಳವನಾಂತನು ನೆಮ್ಮದಿಯನು ಸಲೆ ಜೀವದಿನವನುಳಿಸಿ.

೬೭

ಕಣೆಯನೆಳೆಯನು ನವಿಲು ಮೋಹಿಸಿ ಕೆದರಿ ಹೀಲಿಯ
ಬಳಿಯೆ ಕುಣಿದರು ಕುದುರೆಯ
ಒಡನೆ ರತಿಕೇಳಿಯೊಳು ಬಿರ್ಚಿದ ಚಿತ್ರಮಾಲೆಯ
ಮುಡಿಯ ನೆನೆದನು ಮಡದಿಯ.

೬೮

ಕಠಿಣಮುಪ್ಪ ಆ ವಿಹಾರದಿಂದಲೊಗೆದ
ನೃಪನ ಮೊಗದ ಬೆಮರ ಹನಿಯ ಮಾಲೆಯ
ಕಳೆದುದೊಡನೆ ನೆನೆಯ ಕೊನೆಯನೊಡೆದುಬಂದ
ತುಹಿನಶೀಕರಾಂಬುವೆರೆದ ಗಾಳಿಯಡವಿಯ.

೬೯

ಮರೆತು ಬೇರೆಕಾರ್ಯಗಳನು
ಮಂತ್ರಿಜನರೊಳಿರಿಸಿ ಹೊರೆಯ
ನಿಂತು ಬನದೊಳಿರಲು ನರಪನು
ನಿರುತವೊಲಿದ ಕತದೆ ಬೆಳೆದ
ಒಲವೊಳಿಂದು ಮೃಗಯೆ ಚತುರ
ಕಾಮಿನಿವೊಲು ಕೂರ್ತಳವನನು.

೭೦

ಲಲಿತಕುಸುಮಪಲ್ಲವದ ತಲ್ಪದೊಳು
ಉರಿಯುವೋಷಧಿಯ ದೀಪ ಹೊಳೆದು ಬೆಳಗಿರಲು
ಎಲ್ಲ ಪರಿಜನರದೆಲ್ಲೊ ಉಳಿದವನು
ಇಲ್ಲಿ ಮಲಗಿ ತಾನಿರುಳ ನೂಂಕಿದನು ನೃಪನು.

೭೧

ಪಟುಪಟಹಸ್ವನದಂತಿರುವಾನೆಯ
ಕಿವಿಗಳ ಬಡಿತದಿನೆಚ್ಚರಗೊಂಡನು ಉದಯದೊಳವನಿಪನು
ವಿಹಗವಿಕೂಜಿತವಂದಿಗಳೊಸಗೆಯ
ಸುಖಕರಮಂಗಳಗೇಯವ ಕೇಳುತ ನಲಿದನು ದಶರಥನು.

೭೨
ಬಳಿಕ ಪರಿಜನದೂರನಾದವ
ನಿಪನು ತಾನಾ ರುರುವಿನಧ್ವದೊಳ್ಬೈದುತಿರುವಂದು
ದಣಿದು ನೊರೆಗರೆವಶ್ವದೊಡನೈ
ತಂದನಾ ಋಷಿವರರ ತಮಸಾನದಿಯ ತೀರವನು.

೭೩
ಅಲ್ಲಿ ಕೊಡದೊಳು ನೀರು ತುಂಬುವ
ಘುಳುಘುಳುಧ್ವಾನವನು ಕೇಳುತಲೊಡನೆ ದಶರಥಭೂಪನು
ದ್ವಿರದಬೃಂಹಿತವೆಂದು ಶಂಕಿಸಿ
ಶಬ್ದಪಥವನು ಲಕ್ಷ್ಯಗೈದಿರದೆಸೆದನಂಬನದೊಂದನು.

೭೪
ಕ್ಷತ್ರಿಯ ನಿಷಿದ್ಧಮೆಂದಿರ್ದುದನೊಡರ್ಚಿದನು
ವಿಧಿಯನುಲ್ಲಂಘಿಸಿದನಂದು
ಶ್ರುತವಂತರುಂ ರಜೋಗುಣಕಲಿತರಾದಂದು
ದುಷ್ಪಥದೊಳಡಿಯಿಡುವರಹುದು.

೭೫
ತಾತ ಹಾಹಾ ಎಂಬ ದನಿಯನು
ಕೇಳಿ ಬಾಕುಳಿಗೊಂಡ ನರಪನು
ಬೆತ್ತಗಳ ಮೆಳೆಮೆಳೆಯೊಳರಸುತಲದರ ಮೂಲವನು
ತನ್ನ ಕಣೆ ಹೊಕ್ಕಿರುವ ಬಾಲನು
ಗಡಿಗೆ ಸಹಿತುರುಳಿರುವ ಪರಿಯನು
ಕಂಡು ನೊಂದನು ತನ್ನನೇ ಕಣೆ ಹೊಕ್ಕವೊಲು ನೃಪನು.

೭೬
ಪ್ರತಿಥಕುಲಸಂಭೂತನವನಿಪ
ನೊಡನೆ ತುರಗವನಿಳಿದು ನಿಂದನು
ನಿನ್ನ ನಿಜಕುಲವಾವುದರುಹೆಂದವನ ಕೇಳಿದನು
ನೀರಗಡಿಗೆಯ ನೊರಗಿದಾತನು
ಗದ್ಗದಧ್ವನಿಯಿಂದಲೊರೆದನು
ನಾಂ ದ್ವಿಜೇತರ ಮುನಿಯ ಪುತ್ರನು ಎಂದು ತೊದಲಿದನು.

೭೭

ಅವನ ಬೋಧನೆಯಿಂದಲರಸನು
ಕೀಳದೆಯೆ ಮೈಗಿಳಿದ ಕಣೆಯನು
ಕುರುಡು ತಾಯ್ತಂದೆಯರ ಬಳಿಗಾ ಬಾಲನನ್ನಿರದೊಯ್ದನು
ಅವರ ಆ ಒಬ್ಬನೆಯ ಮಗನನು
ಕುರಿತು ಆತುರದಿಂದಲರಸನು
ಅರಿಯದೆಯೆ ತಾನಂದು ಗೈದುದನವರಿಗರುಹಿದನು.

೭೮

ಎನಿತೊ ರೋದಿಸಿ ದಂಪತಿಗಳಂ
ದಣುಗನನು ಕೊಂದವನನೆರೆದರು
ಎದೆಯೊಳೂರಿದ ಶಲ್ಯವನು ಹೊರಗೆಳೆವುದೆಂದವರು
ಒಡನೆ ಆ ಮಗನಸುವು ಹಾರಲು
ಮುನಿಯು ಶಪಿಸಿದನಿಳೆಯ ದೊರೆಯನು
ಕೈಯುಬೊಗಸೆಯೊಳಿಳಿದ ಬಾಷ್ಪವೆ ಶಾಪಜಲವೆನಲು.

೭೯

ಮಗನ ಸಾವಿನೊಳಾದ ದುಗುಡದೊ
ಳಳಿವು ಮುಪ್ಪಿನೊಳೆನ್ನವೊಲು ನಿನ
ಗೊದಗಲೆನ್ನುತೆ ಶಾಪವಚನವ ನುಡಿಯಲಾಬಳಿಕ
ಕಾಲ ತುಳಿತಕೆ ಸಿಕ್ಕಿದುರಗವು
ವಿಷವ ಕಾರುವೊಲಿರುವ ಮುನಿಯನು
ಕುರಿತು ಪೇಳಿದನಿಂತು ತಪ್ಪನು ಮೊದಲು ಗೈದವನು.

೮೦

ಮಗನ ತಾವರೆಮೊಗದ ಚೆಲುವನು
ಕಾಣದಿರುವೆನಗೆರಗಿಬಂದುದ
ನಿದನು ಪೂಜ್ಯರದೊಂದನುಗ್ರಹವೆಂದು ಭಾವಿಪೆನು
ಸುಟ್ಟರೇನಾ ಬೆಳೆಯ ಹೊಲವನು
ಸೌದೆಯಿಂದುರಿದೇಳುವನಿಲನು
ಬಿತ್ತ ಮೊಳೆವೊಡೆವಂತೆ ಮತ್ತದನೊಳ್ಪುಗೈಯುವನು.

೮೧

ದಯವಿಹೀನನು ವಧೆಗೆ ತಕ್ಕವ
ನಿದಿಗೊ ಬೇಳ್ಪನು ಮಾಳ್ಪದನು ಬೆಸ
ಸೆಂದು ಮುನಿಯನು ವಸುಧೆಗೊಡೆಯನು ನುಡಿಸುತಿರುವಂದು
ಆಳಿದ ಮಗನನು ಪತ್ನಿಯೊಡನನು
ಸರಿಪ ಬಗೆಯಹುದದರಿನೊಡನೆಯೆ
ಚಿತೆಯ ನೀನಣಿಗೈವುದೆಂದಾ ಮುನಿಯು ಬೇಡಿದನು.

೮೨

ಕೂಡಿಕೊಳಲನುಚರರು ರಾಜನು
ಜವದೆ ಮುನಿಶಾಸನವ ನಡಸುತೆ
ಪಾಪಕೃತ್ಯದೊಳಳಿದ ಧೃತಿಯೊಳು ರಾಜಧಾನಿಯನು
ಮುಂದಣಾತ್ಮವಿನಾಶಕಾರಣ
ವೆನಿಪ ಶಾಪವನಾಂತು ಎದೆಯೊಳು
ಔರ್ವನನು ತಳೆದಂಬುರಾಶಿವೊಲವನು ಸಾರಿದನು.

---

## ಹತ್ತನೆಯ ಸರ್ಗ

# ರಾಮಾವತಾರ

೧

ಪೃಥಿವಿಯನು ಶಾಸಿಸುತ ಪಾಕಶಾಸನತೇಜನಾಳುತಿರಲಂದು
ತುಂಬಿರ್ದುದಾಸಮೃದ್ಧಂಗಬ್ದವಿರ್ಪ್ಪತ್ತೈದುಸಾವಿರಂ ಸಂದು.

೨

ಪೂರ್ವಜರ ಋಣಮೋಕ್ಷಸಾಧಕನು ತಾನೆನಿಸಿದಾ ಅಪತ್ಯಕನನ್
ಕಂಡುದಿಲ್ಲವನೊಡನೆ ಶೋಕಾಂಧಮಂ ತೊಡೆವ ಮಗನೆನುವ
ಬೆಳಕನ್

೩

ಕಾರಣಾಪೇಕ್ಷಸಂತಾನಕೆಡೆಯೆನಿಸಿ ದೊರೆ ಚಿರಮಿರ್ದನುಂತೆ
ಕಡೆವುದಕೆ ಮುನ್ನಮವ್ಯಕ್ತರತ್ನಂಗಳಿಂದೆಸೆವಬ್ಧಿಯಂತೆ.

೪

ಆ ಜಿತೇಂದ್ರಿಯರಾದ ಋಷ್ಯಶೃಂಗಾದಿ ಋತ್ವಿಜರಂದು ಬಂದು
ಸಂತಾನಕೆಳಸಿದನ ಪುತ್ರಕಾಮೇಷ್ಟಿಯನು ತೊಡಗಿರ್ದರಂದು.

೫

ಹರಿಯ ಬಳಿ ಬಂದರಾ ಪೌಲಸ್ತ್ಯಬಾಧಿತರು ದೇವತೆಗಳಾಗ
ಬೇಸಗೆಯೊಳುರಿ ಬೆಂದ ದಾರಿಗರು ಮರದ ನೆರಳೆಡೆಗೈದುವಂತೆ.

೬

ಅವರುಂ ಉದನ್ವನ್ತನಂ ಸಾರ್ದರಾ ಆದಿಪೂರುಷನುಮೆಳ್ದನ್
ಅನವಕಾಶಮೆ ವಲಂ ಭಾವಿಕೃತಿಸಿದ್ಧಿಯ ಸುಲಕ್ಷಣಂ ತಾನ್.

೭

ಭೋಗಿಭೋಗಾಸನಾಸೀನನಂ ಕಂಡರಂದಾ ದಿವೌಕಸರು
ಆ ಫಣಾಮಂಡಲದಿನುರ್ಚಿಬಹ ಮಣಿವೆಳಗಿನೊಳು ಹೊಳೆವ ಹರಿಯ.

೮

ಸರಸಿಜಾನನೆ ಲಕ್ಷ್ಮಿ ಪಟ್ಟೆಯುಡೆಯಂಚಿನೊಳು ಮೇಖಲೆಯ ಮುಚ್ಚಿ
ಕೊಡೆಯ ಮೇಲಿರಿಸಿರುವ ಚಿಗುರಿನಂಗೈಗಳಲಿ ಚರಣವಿಟ್ಟಿರುವ

೯

ಬಿರಿದ ತಾವರೆಗಣ್ಣಿ ನೆಳೆವಿಸಿಲಿನೆಸೆಯುಡೆಯ ಶಾರದಶ್ರೀಯ
ಪ್ರಾರಂಭಸುಖದರ್ಶನಾರಂಭ ದಿನದವೋಲಿರುತಿರುವ ಹರಿಯ

೧೦

ಹೊಗರಿನೊಳು ಶ್ರೀವತ್ಸವನು ಬಳಿವ ಸಿರಿಯ ವಿಭ್ರಮಮುಕುರವೆನುವ
ಕೌಸ್ತುಭಾಖ್ಯವನಂಬುಸಾರವನು ತಾನು ಪೇರುರದೊಳಾಂತಿರುವ

೧೧

ದಿವ್ಯಮಾದಾಭರಣಗಳ ತಳೆದ ವಿಟಪಂಗಳಾಕಾರಮಿರುವ
ತೋಳುಗಳಿನಿನ್ನೊಂದು ತೋಯಜೋದ್ಭವಪಾರಿಜಾತದಂತಿರುವ

೧೨

ರಕ್ಕಸರ ನಾರಿಯರ ಕೆನ್ನೆಗಳ ಮದರಾಗಗಳನಳಿಸುತಿರುವ
ಚೇತನಂದಳೆದಾಯುಧಂಗಳಂದೊಲಿದು ಜಯಜಯಮೆನ್ನುತಿರುವ

೧೩

ಕುಲಿಶದೇರಿನ ಗುರುತನಾಂತಿರುವ ವಾಸುಕಿಯ ಹಗೆಯನುಳಿದಿರುವ
ವಿನಯದಲಿ ಬೊಗಸೆಗೈ ಮುಗಿದಿರುವ ಗರುಡನಿಂದೋಲೈಸಿಕೊಳುವ

೧೪

ಯೋಗನಿದ್ರಾಂತದೊಳು ಸುಪ್ರಸನ್ನತೆಯಾಂತ ನಿರ್ಮಲಾಕ್ಷಿಯೊಳು
ಸುಖನಿದ್ರೆಯನು ಕೇಳ್ವ ಭೃಗ್ವಾದಿ ಋಷಿಗಳನನುಗ್ರಹಿಸುತಿರುವ

೧೫

ಸುರರ ಹಗೆಗಳ ಶಮನಗೊಳಿಸಲಿರುವಾತನಿಗೆ ಮಣಿದು ಆ ಸುರರು
ಸ್ತೋತ್ರಾರ್ಹನಾತನನು ಬಳಿಕ ತಾವಿಂತೆಂದು ಹೊಗಳತೊಡಗಿದರು.

೧೬

ಆದಿಯೊಳು ವಿಶ್ವಸೃಜನೆನಿಸಿದಪೆ ವಿಶ್ವರಕ್ಷಕನೆನಿಪೆ ಮಧ್ಯೆ
ಅಂತ್ಯದೊಳು ವಿಶ್ವಸಂಹರ್ತನೆನಿಸುವೆ ನಮೋ ತ್ರೇಧಾಸ್ಥಿತಾತ್ಮ!

೧೭

ಬಾನ್ನೀರಿನೊಂದೆರುಚಿ ತಳೆವಂತೆ ಭಿನ್ನತೆಯ ಕೆಡೆಯಲೆಡೆಯೆಡೆಯೆ
ನಿರ್ವಿಕಾರನು ಪಡೆವೆ ಪೆರಪೆರತವಸ್ಥೆಗಳ ಗುಣಗುಣಗಳಿಂದೆ.

೧೮

ನೀನು ಮಿತಲೋಕನು ಅಮೇಯನಯ್ ನಿಸ್ಪೃಹನು ಪ್ರಾರ್ಥನಾವಹನಯ್
ಜಿಷ್ಣು ನೀನಜಿತನಯ್ ಅವ್ಯಕ್ತನಾದೊಡಂ ವ್ಯಕ್ತ ಕಾರಣನಯ್.

೧೯

ನೀನೆ ಹೃದಯಸ್ಥನಯ್ ನೀನನಾಸನ್ನನಯ್ ನಿಷ್ಕಾಮಿ ಮೇಣ್ ತಪ್ರೋರತನಯ್
ನೀನಾದಿಪುರುಷನಯ್ ನೀಂ ಜರಾರಹಿತನಯ್ ನಿರ್ದುಃಖಿ ಮೇಣ್ ದಯಾ
ಮಯನಯ್.

೨೦

ನೀನೆ ಸರ್ವಜ್ಞನಯ್ ನೀನವಿಜ್ಞಾತನಯ್ ನೀನ್ ಸರ್ವಯೋನಿ ಮೇಣ್ ನೀನೆಯೆ
ಸ್ವಯಂಭು
ನೀನೆಲ್ಲಕಾಣ್ಮನಯ್ ನೀನೆಯೆ ಅನೀಶನಯ್ ನೀನೊರ್ವನಿರ್ಪೆಯಯ್ ನೀನೆಯೆ
ಅನೇಕನ್.

೨೧

ನೀಂ ಸಪ್ತಸಾಮೋಪಗೀತನಯ್ ಮೇಣ್ ನೀನೆ ಸಪ್ತಾರ್ಚಿಮುಖನಯ್
ಸಪ್ತಾಭಿಶರತಲ್ಪಶಾಯಿಯಯ್ ಸಪ್ತಲೋಕೈಕ ಸಂಶ್ರಯನಯ್.

೨೨

ನೀಂ ಚತುರ್ವರ್ಗಫಲದರಿಮೆಯಯ್ ನೀಂ ಚತುರ್ಯುಗಕಾಲಗತಿಯಯ್
ನೀಂ ಚತುರ್ವರ್ಣಮಯಲೋಕಮಯ್ ಸರ್ವಮಂ ನಿರ್ಮಿಸಿದ ನೀಂ
ಚತುರ್ಮುಖನಯ್.

೨೩

ಯೋಗಬಲದಿಂದಾಂತ ವಿಷಯ ವಿಮುಖತೆಯ ಬಗೆಯಿಂ ಧ್ಯಾನಿಪಾ ಯೋಗಿವರ್ಯರ್
ಮುಕ್ತಿಗೆಂದರಸುವರು ಹೃದಯದೊಳು ನೆಲಸಿರುವ ನಿನ್ನನು ಲಸಜ್ಜ್ಯೋತಿಮಯನನ್.

೨೪

ಜನಿ ನೀನೆ ಜನಿರಹಿತನುಂ ನೀನೆ ನೀನೆಯೆ ನಿರೀಹನಯ್ ಮೇಣ್ ಹತದ್ವಿಷನಯ್
ನೀನೆ ಮಲಗಿರ್ಪವನ್ ನೀನೆ ಎಚ್ಚತ್ತವನ್ ನಿನ್ನ ನೆಲೆಯರಿದವನದಾವನ್.

೨೫

ಶಬ್ದಾದಿವಿಷಯಗಳನುಣುವುದಕೆ ಕಠಿಣತಪವೆಸಗಲಿರ್ಪುದಕೆ
ನೀನಾರ್ಪೆ ಜನರ ಕಾಪಿಡುವುದಕೆ ಮೇಣ್ ಕೆಮ್ಮನಿರ್ಪುದಕೆ.

೨೬

ಪಲತೆರದೊಳಾಗಮಗಳಿಂ ಭಿನ್ನಮಾದ ಫಲಸಾಧಕಪಥಂಗಳ್
ನಿನ್ನೊಳೆಯೆ ಸೇರ್ಗುಮಿರದಂಬುಧಿಯನೈದುವೊಲು ಗಂಗೆಯ ಪೊನಲ್ಗಳ್.

೨೭

ನಿನ್ನೊಳೆಯೆ ಮನವಿಟ್ಟು ತಮ್ಮೆಲ್ಲ ಕರ್ಮಗಳ ನಿನ್ನೊಳಿರದರ್ಪಿಸುತಲಿರುವ
ಆ ವಿರಕ್ತರು ಭವಕೆ ಮರಳದೊಲು ಕಾಪಿಡಲು ನೀನೆ ಗತಿ ದೇವ.

೨೮

ಪ್ರತ್ಯಕ್ಷಮಾದೊಡಂ ಮಹ್ಯಾದಿ ತವಮಹಿಮೆ ಪರಿಕಿಸಲ್ಕರಿದು
ವೇದಪ್ರಮಾಣಾನುಮಾನಾದಿಗಳಿಗರಿದು ನೀನೆನಲ್ಕರಿವುದೆಂತೊರೆದು.

೨೯

ಸಂಸ್ಮರಣಮಾತ್ರದೊಳೆ ಪುರುಷರನು ಪೂರ್ಣಪರಿಶುದ್ಧರಂಗೈವೆಯೆನಲಿಂದು
ಭವದೀಯ ದರ್ಶನೇತ್ಯಾದಿಗಳ ಫಲಮಿನ್ನದೆಂತಿರ್ಕುಮೆಂದರಿಯಬಹುದು.

೩೦

ಶರನಿಧಿಯ ರತ್ನದೊಲು ಭಾಸ್ಕರನ ಕಿರಣದೊಲಮೇಯ ತವಚರಿತೆ
ಬಗೆಗೆ ಮೇಣ್ ಬಣ್ಣನೆಗೆ ನಿಲುಕದೆ ಅತೀತಮೆನಿಸಿರ್ಪುದಿಂದಲ್ತೆ.

೩೧

ಪಡೆಯದಿಹುದೇನಿಹುದು ಪಡೆಯುವುದದೇನಿಹುದು ಅರೆ ಯಾವುದಿಹುದು
ನಿನ್ನೊಂದು ಜನನಕರ್ಮಂಗಳವು ಬರಿದೆ ಲೋಕಾನುಗ್ರಹಾರ್ಥಮಹುದಹುದು.

೩೨

ಭವದೀಯ ಮಹಿಮೆಯನು ನುತಿಪ ನುಡಿ ಮೌನವನು ತಳೆವುದು ಸಮಂತು
ಅಜ್ಞತೆಯೊ ಬಳಲಿಕೆಯೊ ಅಲ್ಲದೆಯೆ ಗುಣದ ಮಿತಿಯಿಂದೆಂದುಮಲ್ತು.

೩೩

ಸಂಪ್ರೀತನಂಗೈದರಾ ಅಧೋಕ್ಷಜನನಂದಮರರ್ಕಳಿಂತು
ಪರಮೇಷ್ಠಿಯಾತನ ಯಥಾರ್ಥಸಂಕಥನವದು ನುತಿಯೆನಿಪುದೆಂತು!

೩೪

ಕುಶಲಸಂಪ್ರಶ್ನೆಯಿಂದಳ್ತಿಯನು ತೋರ್ಪಡಿಸಿದಾತನೊಳು ಅಮರರ್
ಲಯಕಾಲದಿಂಮುನ್ನಮುರುಳಿಬರ್ಪಬ್ಧಿಯೊಂದಂಜಿಕೆಯನೊರೆದರ್.

೩೫

ಆ ಬಳಿಕ ದಡದೆಡೆಯ ಗಿರಿಗಹ್ವರಂಗಳೊಳು ಮಾರ್ವೊಳಗುವಂತೆ
ಪೆರ್ಗಡಲ ಮೊರೆತಮುಮನಿಳಿಕೈವ ದನಿಯಿಂದೆ ಹರಿಯೊರೆದನಲ್ತೆ.

೩೬

ಅಕ್ಷರಸ್ಥಾನಗಳನರಿತಾ ಪುರಾಣಕವಿಯುಚ್ಚರಿಸಿದಂದು
ಸಂಸ್ಕಾರವಡೆದಿರ್ಪ ವಾಣಿ ದಲ್ ಚರಿತಾರ್ಥೆಯೆನಿಸಿರ್ದಳೆಸೆದು.

೩೭

ವಿಭುಮುಖೋದ್ಗತೆಯಾಕೆ ರಂಜಿಸಿದಳಮಳದಂತಪ್ರಭಾಲಸಿತೆ
ಪಾದನಿರ್ಯಾತಾವಶಿಷ್ಟಗಂಗಾನದಿಯ ಊರ್ಧ್ವೋಘದಂತೆ.

೩೮

ಜೀವಿಗಳ ಮೊದಲೆರಡು ಗುಣಗಳನು ಮೂರನೆಯದಳಿಯಿಸುವ ತೆರದೆ
ರಾಕ್ಷಸನು ನಿಮ್ಮೆಲ್ಲರನುಭಾವಪೌರುಷವನಳಿಸಿಹುದನರಿದೆ.

೩೯

ಬಯಸದೊಡಮೊಳವೊಕ್ಕು ಸಾಧುಜನಹೃದಯವನು ಪೀಡಿಪಘಂದಂತೆ
ಲೋಕತ್ರಯಂಗಳನುಮಸುರನುಪಟಳಗೊಳಿಪನೆನ್ನುವುದನರಿತೆ.

೪೦

ನಮ್ಮಿಬ್ಬರೆಸಕಮುಮದೊಂದೆಯೆನಲೆರೆವುದೇಕಿಂದ್ರನಿಂತೆನ್ನನ್
ಬೇಡದೆಯೆ ಅಗ್ನಿ ಸಾರಥ್ಯವನು ಕೊಂಡಪನು ತಾನೆ ದಲ್ ಮರುತನ್

೪೧

ನಿಜಖಡ್ಗಕರ್ಪಿಸದೆ ತಾನುಳಿಸಿಕೊಂಡಿಹನು ಹತ್ತನೆಯ ತಲೆಯನ್
ನನ್ನ ಚಕ್ರದ ಬಾಯ್ಗೆ ತಗುವ ಲಭ್ಯಾಂಶದೊಲು ಆ ದುಷ್ಟದನುಜನ್.

೪೨

ಸ್ರಷ್ಟುವಿನ ವರದಾನವನು ನೆನೆದು ದುಷ್ಟನುತ್ಕರ್ಷವನು ತಾಳ್ದನ್
ಸೃಷ್ಟಿನಿಯಮಕೆ ಮಣಿದು ಭೋಗಿಯುತ್ಕರ್ಷವನು ಸಹಿಪ ಚಂದನದೋಲ್.

೪೩

ನರರ ಕಡೆಗಣಿಸುತ್ತೆ ಸುರರಿಂದವಧ್ಯತ್ವ ದೊರೆಕೊಳ್ಳಲೆಂದು
ತಪದಿಂದೆ ಪರಿತುಷ್ಟನಾದ ಧಾತಾರನನು ಅವನೆರೆದನೆಂದು.

೪೪

ನಾಂ ದಾಶರಥಿಯಾಗಿ ನಿಶಿತಶರಹತಿಯಿಂದೆ ತಚ್ಛಿರಮನರಿದು
ತಲೆಯ ತಾವರೆಗಳನು ರಣರಂಗದರ್ಚನೆಗೆ ತಂದಿಡುವೆನಿಂದು.

೪೫

ಯಾಜ್ಞಿಕರು ವಿಧ್ಯುಕ್ತರೀತಿಯಿಂದರ್ಪಿಸುವ ಭಾಗಗಳನೊಲಿದು
ಮಾಯಾವಿಯಾದಸುರರಪಹರಿಪ ಮೊದಲೆ ನೀಂ ಕೈಕೊಳ್ಳುದದನು.

೪೬

ಗಗನದೊಳು ಚಲಿಪ ವೈಮಾನಿಕರು ತದ್ಘನಾವರಣತತ್ಪರರು
ಪುಷ್ಪಕಾಲೋಕಸಂಕ್ಷೋಭವನು ತೊರೆದಪರು ಪುಣ್ಯೈಕಥನರು.

೪೭

ಶಾಪಯನ್ತ್ರಿತನಸುರನೆಳೆತಂದ ವನಿತೆಯರ ಮುಡಿಸೋಂಕದಿಹನು
ನೀವಿಂದು ಬಿಚ್ಚುವಿರಿ ಮಲಿನಗೊಳದಮರಿಯರ ವೇಣಿಬಂಧವನು.

೪೮

ರಾವಣಾವಗ್ರಹದಿನುರೆಬೆಂದ ದೇವಸಸ್ಯಾವಳಿಯ ನಲಿದು
ಈ ತೆರದೆ ನುಡಿಯ ಸೊದೆಮಳೆಗರೆದು ಹರಿಮೇಘ ಮೈಗರೆದುದಂದು.

೪೯

ಸುರಕಾರ್ಯಕುಜ್ಜುಗಿಸಿದಾತನನು ಸ್ವಾಂಶಂಗಳಿಂದಲಿಂದ್ರಾದ್ಯರ್
ಮರುತನನು ಪೂಗಳಿಂದನುಸರಿಪ ಮರಗಳವೊಲನುಸರಿಸುತಿರ್ದರ್.

೫೦

ಇತ್ತ ದಶರಥನೃಪನು ಪುತ್ರಕಾಮೇಷ್ಟಿಯನು ಕೊನೆಗೊಳಿಸಿದಂದು
ಅಗ್ನಿಯಿಂ ಋತ್ವಿಜರ ವಿಸ್ಮಯಂಬೆರೆದೊರ್ವನೈತಂದನೊಲಿದು.

೫೧

ಆ ಆದಿಪುರುಷನೊಳವೊಕ್ಕುದರಿನಾತನುಂ ಯತ್ನದಿಂದಾಂತು
ಹೇಮಪಾತ್ರದೊಳಿರುವ ಆ ಪಯಶ್ಚರುವಿಡಿದು ಬಂದನು ಸಮಂತು.

೫೨

ಪರಮೇಷ್ಠಿಸಂಬಂಧಪುರುಷನೊಲಿದಿತ್ತುದನು ಕೊಂಡನವನಿಪನು
ಉದಧಿಯೊಲಿದೀವ ಜಲಸಾರವನು ಸಂತಸದೆ ಕೊಳುವವೊಲು ವೃಷನು.

೫೩

ಆ ದೊರೆಯನನ್ಯದುರ್ಲಭಗುಣಗಳದರಿಂದೆ ಜಗಕೆಸೆದುದೈಸೆ
ಲೋಕತ್ರಯಂಗಳನು ಪಡೆದವನುಮವನೊಳೊಗೆತರ್ಪುದರ್ಕೆಳಸೆ.

೫೪

ಹಂಚಿದನು ಚರುವೆನುವ ಹರಿತೇಜವನ್ನಿರ್ವರರಸಿಯರಿಗವನು
ಪರ್ಚಿಗುಡುವಂದದೊಳು ಭೂಮ್ಯಂತರಿಕ್ಷಗಳಿಗೆಳೆಬಿಸಿಲನಿನನು.

೫೫

ಕೌಸಲ್ಯೆ ಸನ್ಮಾನ್ಯೆ ಕೈಕೆ ಮೆಚ್ಚಿನ ಮಡದಿ ಅಂತೆ ದಶರಥನು
ಬಹುಮತಿಸಲೆಳಸಿದನು ಅವರಿರ್ವರಿಂದಲಂದಾ ಸುಮಿತ್ರೆಯನು.

೫೬

ಮತಿವಂತಭೂಪತಿಯ ಚಿತ್ತವನು ತಿಳಿದಿರ್ವರರಸಿಯರುಮಂದು
ಚರುವಿನರ್ಧಾರ್ಧಭಾಗಂಗಳಿಂದಾಕೆಯನು ತೋಷಿಸಿದರೊಲಿದು.

೫೭

ಮತ್ತೇಭದಿರ್ಕಡೆಯ ಮದಜಲದೊಳಳ್ತಿಯಿಂದೊಪ್ಪುವಳಿಯಂತೆ
ಸವತಿಜನರಿರ್ವರೊಳುವೊಂದೆ ತೆರದೊಲುಮೆಯಿಂದವಳಿರ್ದಳತ್ತೆ.

೫೮

ಲೋಕಹಿತಕಾನುಪ್ರೊಲು ಜಲಮಯದ ಗರ್ಭಗಳನಿನನಮೃತಕರಗಳ್
ದೇವಾಂಶಸಂಜನಿತ ಗರ್ಭಗಳನಾಂತರಂದಾ ಅರಸಿಯರ್ಕಳ್.

೫೯

ತಲೆದೋರಲಿರ್ಪ ಫಲಗಳನಂತರಂಗದೊಳೆ ತಳೆದೆಸೆವ ಸಸ್ಯಂಗಳಂತೆ
ಗರ್ಭಿಣಿಯರರಸಿಯರದೊಂದಿನಿಸು ಬೆಳ್ಪೊಗರನಾಂತೆಸೆವರತ್ತೆ.

೬೦

ಅಸಿಚಕ್ರ ಶಾರ್ಙ್ಗಗದೆ ಶಂಖಂಗಳಂ ಪಿಡಿದ ವಾಮನರು ಬಂದು
ತಮ್ಮನುರೆ ಪೊರವಂತೆ ಕನಸುಗಳ ಕಂಡರವರೆಲ್ಲರುಂ ಅಂದು.

೬೧

ಹೊಂಗರಿಯ ಕದಿರೋಳಿಯನು ಕೆದರಿ ರಭಸದಿಂದಭ್ರಗಳನೆಳೆದು
ಗರುಡನಾಕಾಶದೊಳು ತಮ್ಮನಿರದುಯ್ವುಪ್ರೊಲು ಕನಸಾದುದಂದು.

೬೨

ಕೊರಳಿನೊಳು ತಳೆದಿರುವ ಕೌಸ್ತುಭನ್ಯಾಸದಿಂದೆಸೆವ ಸಿರಿ ಬಂದು
ಕರದೆ ತಾವರೆಪಿಡಿದು ಬೀಸುವಂತಿರುಪ್ರೋಲು ಕನಸಾದುದಂದು.

೬೩

ಬಾಂದೊರೆಯನುರೆ ಮಿಂದು ವೇದಮಂತ್ರಂಗಳನು ಪಠಿಸುತ್ತೈತಂದು
ಸಪ್ತರ್ಷಿವರರೈದೆ ತಮ್ಮನರ್ಚಿಸುವಂತೆ ಕನಸಾದುದಂದು.

೬೪

ಆ ಬಗೆಯ ಕನಸುಗಳನವರಿಂದೆ ಪಾರ್ಥಿವನು ಕೇಳಿದನು ನಲಿದು
ಗುರು ಜಗದ್ಗುರುವಿಗೆನಲೆಣಿಸಿದನು ನಿಜಮಹೋನ್ನತಿವಡೆದೆನೆಂದು.

೬೫

ಆವರ ಬಸಿರೊಳಗೊಗೆದನೊಬ್ಬನೆಯೆ ವಿಭುವೊಡೆದನೇಕರೂಪಾಂತು
ತಿಳಿನೀರ ಬಸಿರಿನೊಳು ಮಾರ್ಪೊಳೆವ ಚಂದಿರನ ಬಿಂಬದವೊಲಂತು.

೬೬

ಬಳಿಕ ಪಡೆದಳು ಮಗನ ನೃಪನಗ್ರ್ಯಮಹಿಷಿ ಸತಿ ಬೆಸಲೆಯಾದಂದು
ಕತ್ತಲೆಯನಡಗಿಸುವ ಜೋತಿಯನು ನಿಶಿಯೊಳೋಷಧಿ ಪಡೆಯುವಂತೆ.

೬೭

ದಶರಥನು ಅಭಿರಾಮತನುಕಾಂತಿಚೋದಿತನು ಹೆಸರಿಟ್ಟನಂದು
ರಾಮನೆಂದಾ ಜಗತ್ಪ್ರಥಮ ಮಂಗಲನಾಮಧೇಯವನು ನೆನೆದು.

೬೮

ವೀರರಘುವಂಶಪ್ರದೀಪನಪ್ರತಿಮತೇಜೋವಂತನಿಂದೆ
ಮಿಣುಮಿಣನೆ ಮಿನುಗಿದವು ಹೆರಿಗೆಮನೆದೀಪಗಳು ಮಂಕಾದ ತೆರದೆ.

೬೯

ತೆಳ್ಳನೆಯ ಪೊಡೆಯವಳು ಆತಾಯಿ ಮಗನೊಡನೆ ಹಾಸಿನೊಳಗಿರಲು
ಪುಳಿನದೆಡೆಯಬ್ಜದಿಂದೆಸೆಯುವ ಶರತ್ಕೃಶಸುರಾಪಗೆಯವೋಲು.

೭೦

ಶೀಲವಾನ್ ಸುತನೊರ್ವನುದಿಸಿದನು ಕೈಕೆಯೊಳು ಭರತನೆನುವವನು
ವಿನಯವೆಂತೈಸಿರಿಯಿನಂತವನು ತಾಯಿಯನು ಚಂದಗೊಳಿಸಿದನು.

೭೧

ಲಕ್ಷ್ಮಣನು ಶತ್ರುಘ್ನರೆನುವವಳಿಮಕ್ಕಳನು ಹಡೆದಳು ಸುಮಿತ್ರೆ
ಚೆನ್ನಾಗಿ ಕಲಿತ ಕಲೆ ಜ್ಞಾನವಿನಯಂಗಳನು ಪಡೆದೆಸೆಯುವಂತೆ.

೭೨

ದೋಷಗಳನುಳಿದು ಗುಣಪರಿಪೂರ್ಣವೆನಿಸಿದುದು ಜಗವೆಲ್ಲ ನಲಿದು
ಬುವಿಗಿಳಿದ ವಿಷ್ಣುವನು ಅನುಸರಿಸಿ ದಿವಿಬಂದವೋಲಾದುದಂದು.

೭೩

ಸುಳಿದನು ರಜೋಹೀನಮಾರುತನು ಆ ಚತುರ್ಮೂರ್ತಿಯೊಗೆದಂದು
ಪೌಲಸ್ತ್ಯಭೀತಿಪತಿಯರು ದಿಶಾಪತಿಯರೊಲಿದುಸಿರಾಡಿದಂತೆ.

೭೪

ದನುಜನುಪಟಳದಿಂದಲುರೆನೊಂದ ಭಾಸ್ಕರನು ಮೇಣಾ ಕೃಶಾನು
ಕಳೆತಳೆದು ಹೊಗೆಯಳಿದು ಬೆಳಗಿದರು ನೋವು ನೀಗಿದರವೋಲೆಸೆದು.

೭೫

ಆಕ್ಷಣದೊಳುದುರಿದುದು ರಾಕ್ಷಸಶ್ರೀಯಶ್ರುಬಿಂದುವಿಳೆಗಿಳಿದು
ದಶಮುಖನ ಮಕುಟಂಗಳಿಂದೆ ಆ ಮಣಿತತಿಯ ನೆವದಿಂದಲೊಗೆದು.

೭೬

ದಶರಥನ ಸುತಜನ್ಮದುತ್ಸವವ ಸೂಚಿಸುವ ತೂರ್ಯಘೋಷವನು
ದೇವದುಂದುಭಿಗಳಂದಾರಂಭಗೊಳಿಸಿದವು ದೇವಲೋಕದೊಳು.

೭೭

ಆ ರಾಜಭವನದೊಳು ಸುರತರುವಿನಲರಮಳೆ ಸುರಿಯಿತತಿಶಯದೆ
ಸನ್ಮಂಗಲಾಚಾರಗಳಿಗದುವೆ ತಾನಾದುದಂದಾದಿ ರಚನೆ.

೭೮

ಧಾದಿಯರ ಮೊಲೆವಾಲನುಂಡವರು ಸಂಸ್ಕಾರಸಂಪನ್ನರಂದು
ಬೆಳೆಬೆಳೆದರಣ್ಣನೆಂತಂತಿರುವ ಅಯ್ಯನಾನಂದದೊಡವೆರೆದು.

೭೯

ವಿನಯಕರ್ಮಂಗಳಿಂದವರ ನಿಜವಿಜಯ ಪೆರ್ಚಿರ್ದುದಲ್ತೆ
ಪಾವಕನ ಸಹಜಕಳೆಯಾಜ್ಯಾದಿ ಹವಿಗಳಿಂದುರೆಪೆರ್ಚುವಂತೆ.

೮೦

ಅನಘರಘುವಂಶವನು ಅನ್ಯೋನ್ಯವೊಲಿದವರು ಬೆಳಗಿರ್ದರಲ್ತೆ
ಋತುಗಳಾರುಂ ನಲಿದು ದೇವನಂದನವನವನುರೆ ಬೆಳಗುವಂತೆ.

೮೧

ಸೋದರತೆಯೊಂದೆತೆರನಾದೊಡಂ ರಾಮಲಕ್ಷ್ಮಣರಿರ್ವರೆಂತು
ಭರತಶತ್ರುಘ್ನರಂತೊಲ್ಮೆಯೊಂದೆರಕದೊಳು ತಳ್ತರು ಸಮಂತು.

೮೨

ಸುಳಿಗಾಳಿ ಬೆಂಕಿಯುರಿ ಜೊತೆಯೆಂತು ವೊರೆವ ಕಡಲ್ಜೊಗೆವಪೆರೆಯೆಂತು
ಜೋಡಿಗೊಂಡೆಸೆದಿರ್ದುದಿಬ್ಬಿಬ್ಬರವರ ಪೆರೆಯೆಂತು ಜೊತೆಯಂತು.

೮೩

ಕರಿಮುಗಿಲಿನಿಂದೆಸೆವ ಬೇಸಗೆಯ ಕೊನೆಕೊನೆಯ ದಿವಸಗಳ ತೆರದೆ
ವಿನಯತೇಜಂಗಳಿಂ ಜನಮನವ ಸೆಳೆದಪರು ಜನನಾಥರವರು.

೮೪

ನಾಲ್ವರು ಕುಮಾರಕರು ರಾಮಲಕ್ಷ್ಮಣಭರತಶತ್ರುಘ್ನರೆನುವರ್
ಮೈತಳೆದ ಧರ್ಮಾರ್ಥಕಾಮಮೋಕ್ಷಂಗಳವತಾರದವೊಲೆಸೆದರ್.

೮೫

ಅವರು ಗುರುವತ್ಸಲರು ಗುರುವರನನೊಲಿಸಿದರು ಗುಣಗಣಗಳಿಂದೆ
ದೆಸೆನಾಲ್ಕರೊಡೆಯನನು ಕಡಲುಗಳು ರತ್ನಗಳಿನೋಲೈಪ ತೆರದೆ.

೮೬

ದೈತ್ಯರಸಿಯ ಧಾರೆಗಳನು ಮುರಿದ ನಾಲ್ಕು ದಂತ ಮೆರೆಯುವಮರಕರಿಯೊಲು
ಫಲದ ಸಿದ್ಧಿಯಿಂದಲರಿಯೆಬರ್ಪ ನಾಲ್ಕುಪಾಯವೆರೆದ ನಯದ ಪರಿಯೊಲು.

೮೭

ನೀಳನೊಗದ ಮಾಳ್ಕೆವೋಲು ತೋಳು ನಾಲ್ಕರಿಂದಲೆಸೆವ ಹರಿಯೊಲು
ಹರಿಯ ತೇಜದಿಂದಲೊಗೆದ ನಾಲ್ವರಿಂದಲಿರ್ದನರಸನಂದವೆಸೆಯಲು.

---

# ಹನ್ನೊಂದನೆಯ ಸರ್ಗ
## ಸೀತಾವಿವಾಹ

೧

ಶ್ರೀರಾಮಚಂದ್ರನನು ಧೃತಕಾಕಪಕ್ಷನನು
ಅಧ್ವರವಿಘಾತಶಾಂತ್ಯರ್ಥಮೆಂದಂದು
ಬೇಡಿದನು ಕೌಶಿಕನು ದಶರಥನರೇಂದ್ರನನು
ಕಳೆಯುವರೆ ತೇಜಸರನೆಳೆಯರಿವರೆಂದು.

೨

ಯತ್ನದಿಂ ಪಡೆದನನು ಲಕ್ಷ್ಮಣಸಮೇತನನು
ಮುನಿಗಿತ್ತನೊಲಿದು ಬುಧಸೇವ್ಯನವನಿಪನು
ಪ್ರಾಣಭಿಕ್ಷೆಯ ಬೇಡಿದರ್ಥಿಗಳಿಗಾದರೂ
ಇಲ್ಲವೆಂದೆನಲರಿಯರಾ ರಘೂದ್ವಹರು.

೩

ನಿರ್ಗಮನ ಕಾಲದೊಳು ಪಾರ್ಥಿವನು ನೀಡಿದನು
ಪುರಮಾರ್ಗಸಂಸ್ಕಾರಕಾಣತಿಯನವನು
ಮಾರುತಯುತಾಂಬುದಗಳಾವೊದಲೆ ಸುರಿಸಿದವು
ಸುಮಸಹಿತ ಜಲವರ್ಷಧಾರೆಗಳನೊಲಿದು.

೪

ಗುರುಜನಾದೇಶಕರಣೋದ್ಯತರು ಬಾಲಕರು
ತಂದೆಯಡಿಗೆರಗಿದರು ಧೃತಚಾಪರವರು
ತೆರಳಲಿರುವಾನತರ ತಲೆಯ ಮೇಲುದುರಿದುದು
ದುಃಖಿಸುವ ಭೂಪತಿಯ ಬಾಷ್ಪಜಲಬಿಂದು.

೫

ಜನಕನಯನಾಂಬುವಿಂದಿನಿಸು ಶಿಖೆ ತೊಯ್ದವರು
ಸೋದರರು ಚಾಪಧೃತರಾಮಲಕ್ಷ್ಮಣರು
ಪೌರಜನದೃಷ್ಟಿಕೃತಮಾರ್ಗತೋರಣಯುತರು
ಋಷಿವರನನನುಸರಿಸುತೈತಂದರವರು.

೬

ಆ ಲಕ್ಷ್ಮಣಾನುಚರಮಾತ್ರನಹ ರಾಮನನು
ಮುನಿವರನು ಕರೆದೊಯ್ಯಲೆಳಸಲವನಿಪನು
ಅವರ ರಕ್ಷಣೆಗದುವೆ ಸಾಲ್ಗುವೆಂದಟ್ಟಿದನು
ಹರಕೆಯನು ಕಳುಹಿಸದೆ ನಿಜವಾಹಿನಿಯನು.

೭

ಆ ಮಹೋಜಸ್ವಿಮುನಿಪಥವನನುಸರಿಸಿದರು
ಆಯಿರ್ವರವ್ವೆಯರ ಅಡಿಗೆರಗಿದವರು
ಹೊಳೆಹೊಳೆವ ಭಾಸ್ಕರನ ಗತಿಯನನುಸರಿಸುತಿರು
ವಾಚೈತ್ರವೈಶಾಖರೆನೆ ರಂಜಿಸಿದರು.

೮

ಅಲೆಗಳಂತಲೆವ ನಳಿತೋಳುಗಳಿನವರ ನಡೆ
ಚಲವಾದೊಡಂ ಬೆಳಗಿತೆಳೆಮೆಯಿಂದೆಸೆದು
ಹೆಸರಿಗನುಗುಣವೆನುವ ಮಳೆಗಾಲದೊಳು ಮೆರೆವ
ಉದ್ಧ್ಯ ಮೇಣ್ ಬಿದ್ಧ್ಯಗಳ ಲೀಲೆಯೆಂತಂತೆ.

೯

ಕೌಶಿಕನು ಅರುಹಿದ ಬಲಾತಿಬಲ ಮಹಿಮೆಯೊಳು
ಮಣಿಬದ್ಧಭೂಮಿಯೊಳು ಸಂಚರಿಸಿದವರು
ತಾಯದಿರ ಬಳಿಯೊಳೆಂತಂತವರು ನಡೆದಪರು
ದಾರಿನಡೆವಾಯಸವ ತಾವರಿಯದಿಹರು.

೧೦

ಪೂರ್ವವೃತ್ತಾಂತವನು ಪಿತೃಸಖನು ಕೌಶಿಕನು
ದಾರಿಯನು ನಡೆವಂದು ತಾನೊರೆಯುತಿಹನು
ರಾಘವನು ಸಾನುಜನು ಆ ವಾಹನೋಚಿತನು
ಕಾಲ್ನಡೆಯ ಅಲಸಿಕೆಯ ತಾನರಿಯದಿಹನು.

೧೧

ತಿಳಿನೀರಿನಿಂದಲೋಲೈಸಿತು ಸರೋವರವು
ಸೇವಿಸಿದುದುಲಿಯ ಸವಿಯಿಂ ವಿಹಂಗಮವು
ತಂಬೆಲರು ಸೇವಿಸಿತು ಕಮ್ಮಲರ ಹುಡಿ ಬೀಸಿ
ಮುಗಿಲೋಳಿ ಸೇವಿಸಿತು ತಣ್ಣೆಳಲ ಕವಿಸಿ.

೧೨

ಸೇದೆಯನು ಕಳೆಯಿಸುವ ಮರಗಳಿನಿತಿರಲೇನು
ತಾವರೆಗಳಿಸೆಯುತಿಹ ಕೊಳಗಳಿರಲೇನು
ಬಯಸಿದಣುಗರ ಕಾಣಲಂದು ತಾಪಸಗಣವು
ನಲಿವಾಂತುದೊಗೆಯೆ ಹೊಸ ತಂಪು ಮೇಣ್ ತಣಿವು.

೧೩

ಪುರಹರನು ಮನ್ಮಥನನುರುಹಿದಾರಾಮುವನು
ರಘುರಾಮನೈತಂದನಾತ್ತಕಾರ್ಮುಕನು
ಸುಂದರಶರೀರದಿಂದಂಗಜನಿಗೆಣೆಯಹನು
ಆತನನು ಕಾರ್ಯದೊಳು ತಾಂ ಪೋಲದಿಹನು.

೧೪

ಆ ಸುಕೇತುಜೆಯಿರ್ಪ ಪಥದೊಳೈತರುವಂದು
ಶಾಪವೃತ್ತಾಂತವನು ಮುನಿಯಿಂದಲರಿದು
ಆ ನೃಪಕುಮಾರಕರು ನೆಲಕೂರ್ದ ಕೊಪ್ಪಿಗೆಯ
ಬಿಲ್ಗಳಿಗೆ ಲೀಲೆಯೆನೆ ಬಿಗಿದೆಳೆಯೆ ಹೆದೆಯ.

೧೫

ಆ ಹೆದೆಯ ಬಿರುದನಿಯನಾಲಿಸಿದಾಕ್ಷಣದೆ
ಬಹುಳಕ್ಷಪಾಚ್ಛವಿಯ ಮೈಯ ದನುಜೆ
ತಲೆಯೋಡಿನಲೆವ ಕುಂಡಲದವಳು ತೋರಿದಳು
ಬೆಳ್ವಕ್ಕಿಯೊಟ್ಟೈಸಿದಭ್ರದೋಳಿಯೊಲು.

೧೬

ಹೆಣದ ಬಟ್ಟೆಯನುಟ್ಟು ಭರದಿಂದಲೂಳಿಟ್ಟು
ಕೆಲದ ಮರಗಿಡಗಳನು ಕೆಡಹಿ ಮುರಿದಿಟ್ಟು
ಪಿತೃವನದಿನೈತರುವ ಬಿರುಗಾಳಿಯಂದದೊಳು
ರಾಮನನು ತಾಟಕಿಯು ಬಂದು ತರುಬಿದಳು.

೧೭

ನರರ ಕರುಳಿನ ಕಾಂಚಿ ಜೋಲ್ದಿರೆ ನಿತಂಬದೊಳು
ಮೆರೆಯುತಿರೆ ದಂಡದೊಲು ನೀಡಿರುವ ತೋಳು
ಬರ್ಪವಳನೀಕ್ಷಿಸುತೆ ಎಸೆದನಂದೊರ್ಕಣೆಯು
ನೆಸೆಯುತೊಡನೊಡನಂದು ಪೆಣ್ಗೊಲೆಯ ದಯೆಯ.

೧೮

ತಾಟಕಿಯ ಕಲ್ಲೆದೆಯೊಳಾ ರಾಮಸಾಯಕವು
ಆ ತೆರದೆ ಪೊಕ್ಕಿರಿದು ಕೊರೆದೊಂದು ಬಿಲವು
ರಾಕ್ಷಸರ ಕೊಲುವಂದು ದಾರಿಕಾಣದೆ ತೊಳಲು
ವಂತಕನಿಗಾದತ್ತು ಕದ ತೆರೆದವೋಲು.

೧೯

ನಿಜಬನಮನೊಂದನೆಯೆ ನಡುಗಿಸಿದುದಿಲ್ಲವಳು
ಶರಭಿನ್ನಹೃದಯೆ ಧರೆಗುರುಳುತಿರುವಂದು
ಲೋಕಮೂರನು ಗೆಲಿದು ಸುಸ್ಥಿರನು ಎನಿಸಿರುವ
ರಾವಣನ ಸಿರಿಯುಮನ್ನದುರಿಸಿದಳವಳು.

೨೦

ರಾಮಮನ್ಮಥನಂಬು ಸಹಿಸಲರಿದೆನುವಂತೆ
ಹೃದಯುವನು ಹೊಕ್ಕಂದು ಆ ನಿಶಾಚರಿಯು
ಅರುಣರಸಗಂಧವನು ತನುವಿನೊಳು ಧರಿಯಿಸುತೆ
ಜೀವೇಶವಸತಿಯನು ಕುರಿತು ತೆರಳಿದಳು.

೨೧

ತಾಟಕಾಂತನಿಗಿತ್ತನವದಾನತೋಷಿತನು
ದಾನವರ ಕೊಲುವಂಥ ಮಂತ್ರಾಸ್ತ್ರವದನು
ಕಟ್ಟಿಗೆಯ ದಹಿಸುವೊಂದಾತಪದ ತೇಜವನು
ರವಿಕಾಂತಶಿಲೆಗೀಯುವಂತೆ ಭಾಸ್ಕರನು.

೨೨

ಆ ಬಳಿಕ ರಾಘುವನು ಕೌಶಿಕನು ತಿಳಿಯಿಸಿದ
ವಾಮನನ ಪಾವನಾಶ್ರಮವನೈತಂದ
ಪೂರ್ವಾವತಾರದೊಳು ಮೆರೆದೆಲ್ಲ ಲೀಲೆಯನು
ತಿಳಿಯದೊಡಮೌತ್ಸುಕ್ಯವನು ತಳೆದನವನು.

೨೩

ಶಿಷ್ಯಜನಸಜ್ಜಿತಾರ್ಜನವಸ್ತುಸಂಚಯುವ
ನಾಬದ್ಧ ಪಲ್ಲವಪುಟಾಂಜಲಿದ್ರುಮವ
ಬಳಿಕಲೈತಂದನಾ ಮುನಿಪ ತನ್ನಾಶ್ರಮವ
ದರ್ಶನೋನ್ಮುಖಮೃಗವನಾತಪೋವನವ.

೨೪

ದೀಕ್ಷಿತತಪೋನಿಧಿಯ ವಿಘ್ನದಿಂ ರಕ್ಷಿಪರು
ಅಸ್ತ್ರಗಳನಾಂತವರು ದಶರಥಾತ್ಮಜರು
ಕತ್ತಲೆಯ ದೆಸೆಯಿಂದಲಿಳೆಯ ಪೊರೆವಂದದೊಳು
ಪರಿವಿಡಿಯೊಳುದಯಿಸುವ ಸೂರ್ಯಚಂದ್ರಮರು.

೨೫

ರಕ್ತಬಿಂದುಗಳಂದು ಬಂದುಗೆಯ ಪೂಗಳೊಲು
ಸುರಿಯುತಿರಲದರಿಂದಲಾವೇದಿ ಕಿಡಲು
ಯಾಜ್ಞಿಕರು ನೋಡಿದರು ಯಜ್ಞಕರ್ಮವನುಳಿದು
ಗೊಂದಲದೊಳಾಳಿದರು ಸ್ರುಕ್ಸ್ರುಗಳನೆಸೆದು.

೨೬

ಬೆನ್ನದೊಣೆಯಿಂದುಗಿದು ಕಣೆಯನೊಂದನು ತೆಗೆದು
ಲಕ್ಷ್ಮಣಾಗ್ರಜನೊಡನೆ ಎಸೆದಿರ್ದನಂದು
ಪರ್ದುಗರಿಯೆಲರಿನೊಳು ತೊನೆಯಿಸುತೆ ಹಳವಿಗೆಯು
ನಂಬರದೊಳೈತರುವ ರಕ್ಕಸರ ಪಡೆಯು.

೨೭

ಆ ಮಖದ್ವಿಷಮುಖ್ಯರಿರ್ವರನೆ ತಾನಂದು
ಮಾರ್ಗಣಕೆ ಗುರಿಗೆಯ್ದು ನಿತರರನ್ನುಳಿದು
ಗರುಡನು ಮಹೋರಗವನಾರ್ಪಿನಿಂದಳಿವವನು
ಒಳ್ಳೆಗಳ ಕೊಲಲೆಂದು ಮುಂಬರಿವನೇನು !

೨೮

ಅಸ್ತ್ರಕೋವಿದನವನು ತಿರುವಿನೊಳು ಪೂಡಿದನು
ಉಗ್ರವೇಗದೆ ಪರಿವ ಮಾರುತಾಸ್ತ್ರವನು
ಶೈಲನಿಭಭಾರನನು ತಾಟಕಿಯ ಪುತ್ರನನು
ಪಾಂಡುಪತ್ರದವೋಲು ಕೆಡೆಯೆಚ್ಚನವನು.

೨೯

ಪೆಸರೊಳು ಸುಬಾಹುವೆನುವಿನ್ನೊರುವ ರಕ್ಕಸನು
ಮಾಯೆಯಿಂದತ್ತಿತ್ತ ಸಂಚರಿಸುತಿರಲು
ಆ ಕ್ಷುರಪ್ರದಿನಿರಿದು ರಣಕುಶಲಿ ಹಂಚಿದನು
ಆಶ್ರಮದ ಹೊರಗಿರುವ ಹಕ್ಕಿಗಳು ತಿನಲು.

೩೦

ಇಂತು ಮಖವಿಘ್ನವನು ತೊಡೆದ ಆ ಇರ್ವರನು
ಮೆಚ್ಚಿ ರಣವಿಕ್ರಮಕೆ ಸಲೆಹೊಗಳಿ ನಲಿದು
ಮೌನಯುತ ಕುಲಪತಿಯ ಮಖಕಾರ್ಯವೆಲ್ಲವನು
ಕ್ರಮದಿಂದೆ ಮುಗಿಸಿದರು ಋತ್ವಿಜರು ಅಂದು.

೩೧

ಪ್ರಣತಿಕಂಪಿತಕಾಕಪಕ್ಷರನು ಭ್ರಾತರನು
ಅವಭೃತಸ್ನಾತಕೌಶಿಕಮುನೀಶ್ವರನು
ದರ್ಭಕ್ಷತಾಂತಃಪ್ರದೇಶಕರಯುಗನವನು
ಸ್ಪರ್ಶಿಸಿದನೆರೆದು ತಾನಾಶಿಷಂಗಳನು.

೩೨

ಯಜ್ಞಕುಜ್ಜುಗಿಸಿದಾಮೈಥಿಲನು ಆತನನು
ತಾಂ ನಿಮಂತ್ರಣವಿತ್ತು ಬರವೇಳ್ದನೆಂದು
ತದ್ಧನುಶ್ರವಣಜನಿತೋತ್ಸುಕರ ರಾಘುವರ-
ನೊಡಗೊಂಡು ವಶಿ ನಡೆದನಾ ಮಿಥಿಲೆಗೆಂದು.

೩೩

ಗೌತಮನ ಪತ್ನಿ ತಾನಾವೆಡೆಯೊಳ್ಳೈದಿದಳು
ವಾಸವಕ್ಷಣಕಳತ್ರತೆಯನಂತವಳು
ಆ ವನದ ಮಂಗಳತಪೋವನದ ತರುಗಳೊಳು
ತಂಗಿದರು ಸಂಜೆಯೊಳು ದಾರಿನಡೆದವರು.

೩೪

ತಾನೆನಿತೊ ದಿನಗಳಿಂದಲ್ಲಿ ಕಲ್ಲಾದವಳು
ಚಾರು ನಿಜರೂಪವನು ತಳೆದಳು ಅಹಲ್ಯೆ
ಕಿಲ್ಬಿಷವ ಕಿತ್ತೊಗೆವ ರಾಮನಡಿದಾವರೆಯ
ರೇಣುವಿನನುಗ್ರಹದೊಳಂತಾದುದಲ್ತೆ.

೩೫

ಅರ್ಥಕಾಮಂಗಳಿಂದಾಧರ್ಮವೈವೆತ್ತು-
ದೆನಲೆಸೆವ ಕೌಶಿಕನಿಗರ್ಘ್ಯವನು ಪೊತ್ತು
ಕೇಳ್ದಿದಿರ್ನಡೆದನಲ ಜನಕನು ಜನೇಶ್ವರನು
ಮುನಿ ರಾಘವಾನ್ವಿತನು ಬರುವನೆನುವುದನು.

೩೬

ದಿವಿಯಿಂದೆ ಭುವಿಗಿಳಿದು ಮಿನುಗುವ ಪುನರ್ವಸುವೊ–
ಲಿರ್ಪವರನಿರ್ವರನು ನಡೆನೋಡಿ ನಲಿದು
ಕಣ್ಗಳಿಂದೀಂಟಿದರು ಜನಕನಗರೀಜನರು
ಪಕ್ಷ್ಮಪಾತಂಗಳೊಳನುಸಹನವ ತಳೆದು.

೩೭

ಕ್ರತುವು ಘನಯೂಪದೊಳು ಕೊನೆಯಾಂತುದೆಂದರಿದು
ಕುಶಿಕಕುಲವರ್ಧನನು ಆ ಸಮಯವಿದನು
ಶಿವಧನುವನೀಕ್ಷಿಸುವ ರಾಮನಭಿಲಾಷೆಯನು
ಮಿಥಿಲೇಶಗುಸುರಿದನು ಜನಕನೃಪಗೆಂದು.

೩೮

ಪ್ರಥಿತಕುಲಜಾತನನು ಲಲಿತತನುಬಾಲನನು
ನೋಡಿ ತಾಂ ಚಿಂತಿಸಿದನಂದು ಪಾರ್ಥಿವನು
ಮಣಿಯಲಸದಳವೆನುವ ತನ್ನ ಧನುವನು ನೆನೆದು
ಮಗಳ ಕುಡಲೇಕೆ ನಾಂ ಪಣವಿಟ್ಟೆನೆಂದು.

೩೯

ಹೇ ಮಹಾಮುನಿವರನೆ ಪೇರಾನೆವಿಂಡುಗಳು
ತೊಡಗಲರಿದೆನಿಪೊಂದು ಕಾರ್ಯವಿವರದೊಳು
ಬರಿದೆ ಸಾಹಸಪಡುವ ಸಣ್ಣ ಮರಿಯಾನೆಯನು
ಬಿಡಲು ನಾನೊಪ್ಪಿಗೆಯ ಕೊಡಲಾರದಿಹೆನು.

೪೦

ಚಾಪಧರನರಪತಿಗಳೆನಿತೆನಿತೊ ಬಂದವರು
ಚಾಪದಿಂದುರುನಾಣನನುಭವಿಸಿ ನೊಂದು
ಹೆದೆ ಹೊಡೆದು ತೊಗಲು ಜಡ್ಡಾದವರು ಮರಳಿದರು
ಸ್ವಭುಜಬಲಕಿರಲಿ ಸಲೆ ಧಿಕ್ಕಾರವೆಂದು.

೪೧

ಮಾರ್ನುಡಿದನಿಂತು ಋಷಿ ಬಾಲನ ಪರಾಕ್ರಮವ–
ನಾಲಿಪುದು ಮೇಣ್ ಬರಿಯ ಬಾಯ ಮಾತೇಕೆ
ಶಕ್ತಿಯನು ತೋರಲೆಂತಶನಿ ಗಿರಿಗೆರಗುವುದು
ಧನುವಿನೊಳು ತೋರ್ಪನಿಂದಂತಾರ್ಪನಿವನು.

೪೨

ಕಾಕಪಕ್ಷಕಧರನೊಳಾರಘುಕುಮಾರನೊಳು
ಅಧಿಕಬಲವಿರುವುದನು ನಂಬಿದನು ನೃಪನು
ಆಪ್ತನಿಂತೊರೆದಂದು ಮಿಣುಕುಹುಳದನಿತಿರುವ
ಕಿಡಿಯೊಳಿರುವಂದದೊಳು ಸುಡುವಂಥ ಬಲವು.

೪೩

ಅಬಳಿಕ ಮೈಥಿಲನು ತರಲೆಂದು ಚಾಪವನು
ಕಳುಹಿದನು ನೂರಾರು ಪರಿಚರರನವನು
ಅಮರೇಂದ್ರನಟ್ಟುವ್ರೊಲು ಮೋಡಗಳ ಹಂತಿಯನು
ಪಡೆಯೆ ಆ ತೇಜೋಮಯ ಶರಾಸನವನು.

೪೪

ಹರನಾವ ಚಾಪದಿಂದೋಡುವಧ್ವರಮೃಗವ–
ನಟ್ಟದನೊ ತಾನಂದು ಪೂಡಿ ಮಾರ್ಗಣವ
ಸುಪ್ತಭುಜಗೇಂದ್ರನೊಲು ಭೀಷಣತೆವೆತ್ತುದನು
ನೋಡಿ ಅದನೆತ್ತಿದನು ದಶರಥಾತ್ಮಜನು.

೪೫

ಮನ್ಮಥನು ತೆಳುವರಳ ಬಿಲ್ಗೆ ಹೆದೆ ಬಿಗಿಯುವೊಲು
ನೆರೆದವರು ನೋಡಲೆವೆಮಿಡುಕದಚ್ಚರಿಯೊಳು
ರಾಘವನಯತ್ನದಿಂದೆಳೆದು ಹೆದೆಗಟ್ಟಿದನು
ಗಿರಿಬಲವನಾಂತಿರ್ದ ಕಾರ್ಮುಕವನದನು.

೪೬

ಅತಿಮಾತ್ರಕರ್ಷಣದೊಳಾ ಶರಾಸನ ಮುರಿದು
ಪವಿಪರುಷನಿಸ್ವನವನೊಡನೆಸಗಿದಂದು
ದೃಢಮನ್ಯುಭಾರ್ಗವನಿಗರುಪುವೊಲು ಮೊಳಗಿದುದು
ಮರಳಿ ತಾಂ ಕ್ಷಾತ್ರಕುಲ ಪುಟ್ಟಿರ್ಪುದೆಂದು.

೪೭

ಹರಧನುರ್ಭಂಗದೊಳು ರಾಮನಾರ್ಪನು ನೆನೆದು
ಆ ಶೌರ್ಯಶುಲ್ಕದೊಳು ಮೋದವಾಂತವನು
ಮೈಥಿಲನು ರಾಘವನಿಗರ್ಪಿಸಿದನಾತ್ಮಜೆಯ
ಮೈತಳೆದ ಲಕುಮಿವೋಲಿರುವಯೋನಿಜೆಯ.

೪೮

ಸತ್ಯಸಂಗರ ನೃಪನು ತಾನಂದು ಮೈಥಿಲನು
ರಾಘವನಿಗಾತ್ಮಜೆಯನಾ ಅಯೋನಿಜೆಯ
ಈಯಲೆಂದೊಪ್ಪಿದನು ಅಗ್ನಿಸಾಕ್ಷಿಯ ಪರಿಯ-
ಲಿರ್ದುದೆನೆ ಸಾನ್ನಿಧ್ಯಮಾತಪೋನಿಧಿಯ.

೪೯

ಘನತೇಜಮೈಥಿಲನು ಪೂಜ್ಯರಾಚಾರ್ಯರನು
ಕೋಸಲಾಧೀಶನೆಡೆಗಟ್ಟಿದನು ಪೇಳ್ದು
ನನ್ನ ಮಗಳನುಕೊಂಡು ಮದ್ಬಂಧುಭಾವವನು
ಒಪ್ಪಿ ನೀಂ ನಿಮಿಕುಲವನಾದರಿಪುದೆಂದು.

೫೦

ಸರಿಯೆನಿಪ ಸೊಸೆಯನಂದೆಳಸುತಿರಲವನಿಪನು
ಅನುಕೂಲವಾಗ್ದ್ವಿಜನು ಬಂದನವನಿದಿರು
ಸುಕೃತಿಗಳ ಕಾಂಕ್ಷೆಗಳು ದೇವತರುಫಲದಂತೆ
ಸ್ಮರಣಮಾತ್ರದೊಳೆ ತಾಂ ಫಲಬಿಡುವುವಲ್ತೆ.

೫೧

ಅತಿಥಿಸತ್ಕಾರವನು ಕೊಂಡ ಭೂಸುರನಂದು
ನುಡಿದ ನುಡಿಗಳ ಕೇಳಿ ದಶರಥನು ನಲಿದು
ಪಡೆಯ ಧೂಳಿಯೊಳದ್ದಿ ಭಾಸ್ಕರನ ತೇಜವನು
ತೆರಳಿದನು ವಶಿನೃಪನು ಬಲವೈರಿಸಖನು.

೫೨

ನಿಜಸೇನೆ ಪೀಡಿಸಿರಲುಪವನದ ತರುಗಳನು
ಬಳಸಿದನು ಮಿಥಿಲೆಯನು ಕೋಸಲಾಧಿಪನು
ಸಹಿಸಿರ್ದುದಾನಗರಿಯೊಲವಿನುರುಬಾಧೆಯನು
ಸಹಿಸುವೊಲು ರಮಣಿಯರು ಭರ್ತೃಚೇಷ್ಟೆಯನು.

೫೩

ಆತ್ಮಮಹಿಮಾನುಗುಣಮೆನಲಂದು ತಾವೊಲಿದು
ಆಯಿರ್ವರಾಚಾರನಿಷ್ಠರೊಡವೆರೆದು
ಕನ್ಯಕಾತನಯಕೌತುಕವಿಧಿಯನೆಸಗಿದರು
ವರುಣವಾಸವನಿಭರು ಜನಕದಶರಥರು.

೫೪

ಲಗ್ನವಾದರು ನಲಿದು ಭೂಮಿಜೆಯ ರಾಘವನು
ಅವಳನುಜೆಯೂರ್ಮಿಳೆಯ ರಾಘವಾನುಜನು
ಅವರಿರ್ವರನುಜಾತರಾವರೋಜಸರಂದು
ಜನಕರಾಜಾನುಜಾತ್ಮಜೆಯರನು ಬಂದು.

೫೫

ಸಿದ್ಧಿಯಿಂದೊಡವೆರೆದ ವರಸಾಮಭೇದದೊಲು
ದಾನದಂಡಂಗಳೊಳು ಮೆರೆದರವರಂದು
ನವವಧೂಯುಕ್ತರಿಂದಾನಾಲ್ವರಾತ್ಮಜರು
ಭೂಪತಿಯ ನಾಲ್ಕುಪಾಯಂಗಳೋಲೆಸೆದು.

೫೬

ತಾಂ ಕೃತಾರ್ಥತೆಯಾಂತರನ್ಯೋನ್ಯಸಂಗದೊಳು
ದಶರಥಕುಮಾರಕರು ಜನಕಪುತ್ರಿಯರು
ಪ್ರತ್ಯಯಪ್ರಕೃತಿಸಂಮಿಲನದೊಲು ಸಲೆ ಸಂದು
ಆ ವಧೂವರಮಿಲನಮಿರ್ದುದಂದೆಸೆದು.

೫೭

ಅನುರಾಗದಿಂದವನು ಮಕ್ಕಳ ವಿವಾಹವನು
ಮಿಥಿಲೆಯೊಳು ಬಳೆಯಿಸುತೆ ಪಯಣಬೆಳೆಸಿದನು
ಮೂರಿರುಳು ಕಳೆದಂದು ಬೀಳ್ಕೊಂಡು ಜನಕನನು
ಸೇರಲಿರೆ ದಶರಥನು ತಾನಯೋಧ್ಯೆಯನು.

೫೮

ಪ್ರತಿಕೂಲಮಾರುತನು ನಡೆವ ದಾರಿಯೊಳಂದು
ಧ್ವಜಕುಜಸಮೂಹವನು ಕೆಡಹಿತೆನೆ ಸುಳಿದು
ದಡಮೀರಿ ಪರಿವ ತೊರೆ ಬಯಲು ನೆಲಕೆಂತಂತು
ದಶರಥನ ಪಡೆಗೆಡರನೊಡ್ಡಿತು ಸಮಂತು.

೫೯

ಭಯಗೊಳಿಪ ಪರಿವೇಷಮಂಡಲವನಾಂತಿರುವ
ತರಣಿ ತಾನಾಬಳಿಕ ಕಾಣಿಸಿದನಂದು
ಗರುಡಹತನಾಗಭೋಗಾಗ್ರದಿಂದುದುರಿರುವ
ತಲೆಮಣಿಯ ಮಾಳ್ಕೆಯಿಂದಾತೋರ್ದುದಂದು.

೬೦

ಧೂಸರಶ್ಯೇನಪಕ್ಷಾಲಕಗಳೆಸೆದಿರಲು
ರಕ್ತಾರ್ದ್ರವಸ್ತ್ರದೊಲು ಮೇಘಂಗಳಿರಲು
ತಾಂ ರಜಸ್ವಲೆಯರೊಲು ಆ ದಿಶಾರಮಣಿಯರು
ಆಲೋಕನಾನರ್ಹರಾದರಂದವರು.

೬೧

ಕ್ಷತ್ರಶೋಣಿತದಿಂದೆ ಪಿತೃಗಳನು ತಣಿಯಿಸುವ
ಭಾರ್ಗವನ ಮತ್ತೊಮ್ಮೆ ಕರೆವವೋಲಂದು
ರವಿಗೆದುರು ವೊಗವೆತ್ತಿ ಜಂಬುಕಗಳೊಳ್ದಪವು
ಅತಿಭಯವನಿಳೆಗೆಸಗುವಂದದೊಳು ನೆರೆದು.

೬೨

ಪ್ರತಿಕೂಲಪವನಾದಿ ವೈಕೃತಿಗಳಂ ನೆನೆದು
ಕೃತ್ಯವಿದನವನಿಪನು ನಿಜಗುರುವನಂದು
ಶಾಂತಿಕ್ರಿಯಂಗಳನು ಬೆಸಸೆನಲು ಚಿಂತೆಯನು
ಲಘುಗೈದನಂತ್ಯದೊಳು ಲೇಸಪ್ಪುದೆಂದು.

೬೩

ಅಮಿತತೇಜೋರಾಶಿಮೂಡಿರ್ದುದನಿತರೊಳು
ಆ ಸೇನೆಯಿದಿರಿನೊಳೆ ಒಡನೆ ಹೊಳೆಹೊಳೆದು
ಅದುವೆ ತೋರ್ದುದು ಬಳಿಕ ಮನುಜರೂಪದೊಳೆಸೆದು
ಸೈನಿಕರು ಕಣ್ಣುಜ್ಜಿ ನೋಡುತಿರುವಂದು.

೬೪

ತಾಯಿಯಂಶವನರುಪುವುರುಧನುವನಾಂತವನು
ತಂದೆಯಂಶವನೊರೆವ ಜನಿವಾರದವನು
ಘನಪುರುಷ ತೋರಿದನು ಚಂದ್ರಯುತರವಿಯಂತೆ
ಉರಗನೊಡವೆರೆದಿರುವ ಸಿರಿಕಂಡದಂತೆ.

೬೫

ರೋಷಕರ್ಕಶಮನನು ಪಿತನು ಮರ್ಯಾದೆಯನು
ಮೀರಿ ಬೆಸಸಿರ್ದುದನು ನಡೆಯಿಸಿದ ಮಗನು
ಮುಂದೆ ನಡುಗುವ ತಾಯ ತಲೆಯ ತರಿದಿಟ್ಟವನು
ಕರುಣೆಯನು ಗೆಲಿದ ಬಳಿಕಿಳೆಯ ಗೆದ್ದವನು.

೬೬

ಮಣಿಗಳಿಪ್ಪತ್ತೊಂದು ಮೆರೆವ ಜಪಮಾಲೆಯನು
ಮೂರೇಳು ಸೂಳರಿದೆನವನಿಪರನೆಂದು
ನೆವಗೈದು ಸೂಚಿಪೊಲು ಅಕ್ಷಮಣಿಮಾಲೆಯನು
ಬಲಗಿವಿಯೊಳಾಂತವನು ಕಾಣಿಸಿದನಂದು.

೬೭

ಪಿತೃವಧೆಯ ಕೋಪದೊಳು ಕ್ಷತ್ರಿಯರ ವಂಶವನು
ತವಿಪ ದೀಕ್ಷೆಯನಾಂತ ಪರಶುರಾಮನನು
ಕಂಡವನು ದಶರಥನು ಬಳಿಯ ಎಳಿಮಕ್ಕಳನು
ನೋಡಿ ತನ್ನಯ ದೆಸೆಯ ನೆನೆದು ಮರುಗಿದನು.

೬೮

ಅಕ್ಕರೆಯ ಸುತನೊಳಂ ದಾರುಣಾಹಿತನೊಳಂ
ಮೆರೆಯುತಿರುವಾ ರಾಮನೆನುವೊಂದೆ ಪೆಸರು
ಹಾವೊಳಂ ಹಾರದೊಳಮಿರುವ ಬೆಲೆವಣಿಯಂತೆ
ಭಯಮುಮಂ ಹರುಷಮುಮನೀಯುತಿಹುದಲ್ತೆ !

೬೯

ದಶರಥನು ಕೂಗುತಿರಲರ್ಘ್ಯಮರ್ಘ್ಯಂ ಎಂದು
ಲಕ್ಷಿಸದೆ ತಾನದನು ಭಾರ್ಗವನು ಬಂದು
ಕ್ಷತ್ರಕೋಪಾನಲನ ಕೇಸುರಿಯ ತಾರಕೆಯ
ದಿಟ್ಟಿಯದನಟ್ಟಿದನು ರಾಮನೆಡೆಗೆಂದು.

೭೦

ಭಾರ್ಗವನು ಧರಿಯಿಸುತೆ ಚಾಪವನು ಮುಷ್ಟಿಯೊಳು
ಬೆರಳುಗಳ ಸಂದಿಯೊಳು ಕೂರ್ಗಣೆಯನಾಂತು
ತೊರೆದು ಭಯವನು ಮುಂದೆ ನಿಂದಿರುವ ರಾಮನೊಳು
ಕೊಳುಗುಳಕೆ ಕಾಲ್ಕೆರೆದು ನಿಂದನವನಿಂತು.

೭೧

ಅಪಕೃತಿಯನೆಸಗಿತೆಂದಖಿಳ ನೃಪನಿವಹವನು
ಹಲವುಸಲ ಕೊಂದಾನು ಶಾಂತಿಯಾಂತಿಹೆನು
ಲಗುಡಘಟ್ಟನದಿಂದೆ ಸುಪ್ತಾಹಿಯೆಂತಂತೆ
ಮುಳಿಸಾಂತೆನುರಿಗೊಳಿಸಲೀ ನಿನ್ನ ಚರಿತೆ.

೭೨

ಅನ್ಯರಿನಮನ್ಯವೆನುವೀಶ್ವರನ ಚಾಪವನು
ಕೇಳಿದೆನು ಮಿಥಿಲೆಯೊಳು ಮುರಿದುದನು ನೀನು
ನನ್ನ ಹಿರಿಮೆಯ ಕೋಡನುಡಿದು ಕೆಡಹಿದವೋಲು
ಭಾವಿಸುವೆನಾಧನುರ್ಭಂಗವನು ಕೇಳು.

೭೩

ರಾಮನೆನುವೀಹೆಸರನೊರೆದಂದು ಲೋಕದೊಳು
ಸಲುತಿರ್ದುದಿನ್ನೆವರಮೆನ್ನೊಳೊರ್ವನೊಳು
ನಿನ್ನ ಉಚ್ಚಾರ್ಯದೊಳು ವ್ಯಸ್ತವೃತ್ತಿಯನಾಂತು
ನಾಚಿಸುವುದಾ ಹೆಸರು ಈ ನನ್ನನಿಂತು.

೭೪

ಗಿರಿವರನೊಳಂ ಕಿಡದೆ ಕಣೆಯನಾಂತೆನಗಿಂದು
ಅರಿಗಳಿಹರಿರ್ವರು ಸಮಾಪರಾಧಿಗಳು
ತುರುಕರುವನೊಯ್ದವನು ಒರ್ವನಾ ಹೈಹಯನು
ಜಸವನಪಹರಿಸಲಿರುವಿನ್ನೊರುವ ನೀನು.

೭೫

ರಾಜನನು ಕೊಂದಿರ್ದುಮೆನ್ನೊಂದು ವಿಕ್ರಮದೆ
ಮುದಗೊಳ್ಳದೆನ್ನ ಎದೆ ಈ ನಿನ್ನ ಗೆಲದೆ
ಅಬ್ಧಿಯೊಳಮುರಿದಂದು ತೃಣತತಿಯೊಳೆಂತಂತೆ
ಪಾವಕನ ಮಹಿಮೆಯೆಂದದನೆಣಿಪರಲ್ತೆ.

೭೬

ತಿಳಿವುದೈ ನೀಂ ಮುರಿದ ಈಶ್ವರನ ಚಾಪವದು
ಹರಿಯಿಂದ ಹೃತಸಾರವಾಗಿರ್ಪುದೆಂದು
ತೊರೆಯ ರಯಗತಿಯಿಂದ ಬುಡಕೊರೆದ ದಡದ ತರು
ಬೀಸಿದೊಡಮುರುಳುವುದು ಬಿರುಸಿಲ್ಲದೆಲರು.

೭೭

ಕೊಂಡು ನೀನದರಿಂದಲೆನ್ನ ಚಾಪವನಿದನು
ತಿರುವಿಟ್ಟು ಕಣೆದೊಟ್ಟು ಸೆಳೆ ನೋಳ್ಪೆ ನಾನು
ಸಾಕು ರಣಮಂತಿರಲಿ ಇದನೆಸಗಿದೊಡೆ ನೀನು
ನನಗೆಣೆಯ ತೋಳ್ಬಲದೆ ಸೋಲೊಪ್ಪಿಕೊಳುವೆ.

೭೮

ಅಂತೆಸಗಲಾರದಿರೆ ಝುಗಝುಗಿಸಿ ಕಿಡಿಗೆದರು-
ವೀಪರಶುಧಾರೆಗಿಂದಳುಕುವರೆ ನೀನು
ಬರಿದೆ ಗುಣಘಾತಕಠಿಣತೆಯಾಂತ ನಿನ್ನ ಕಿರು-
ಗೈಗಳನು ಬೊಗಸೆಗೈ ಬೇಡು ಅಭಯವನು.

೭೯

ನುಡಿಯಲಿಂತತಿ ಭೀಮದರ್ಶನನು ಭಾರ್ಗವನು
ಸ್ಮಿತಕಂಪಿತಾಧರನು ದಶರಥಾತ್ಮಜನು
ತದ್ಭಾವಸಂಗ್ರಹಣವೊಂದನೆಯೆ ತಾನಂದು
ಗಣಿಸಿದನು ಸಮುಚಿತೋತ್ತರಮಪ್ಪುದೆಂದು.

೮೦

ಪೂರ್ವಾವತಾರಧನುವಾಂತವನು ರಾಘವನು
ಕಮನೀಯ ಕಾಂತಿಯಿಂದೆಸೆದನು ಸಮಂತು
ಪೊಸಮುಗಿಲೆ ಚೆಂದವೆನಲೊಡಗೂಡಲಿಂದ್ರಧನು
ಆದರದೊಂದಂದವನು ಬಣ್ಣಿಸುವುದೆಂತು.

೮೧

ಬಲ್ಲಿದನು ರಾಘವನು ಆ ಬಿಲ್ಲಿನೊರ್ತುದಿಯ–
ನಿಳೆಗೂರಿ ಬಿಗಿದೆಳೆಯುವನಿತರೊಳೆ ಹೆದೆಯ
ಹೊಗೆಯುಳಿದ ಬೆಂಕಿವೊಲು ನಿಸ್ತೇಜನೆನಿಸಿದನು
ನರಪಕುಲಶತ್ರು ಜಮದಗ್ನಿ ಭಾರ್ಗವನು.

೮೨

ಭೃಗುರಾಮರಘುರಾಮರನ್ಯೋನ್ಯಸಂಮುಖರು
ಪರಿಹೀನಸಂವರ್ಧಮಾನರುಚಿಧರರು
ಪಾರ್ವಣದಿನಾತ್ಯಯದ ಶಶಿದಿವಾಕರರಂತೆ
ನೆರೆದವರ ನೇತ್ರಗಳಿಗವರೆಸೆದರಲ್ತೆ.

೮೩

ಒರ್ಮೆ ಬಲವಳಿದಿರ್ದ ಭಾರ್ಗವನ ವಕ್ತ್ರವನು
ಒರ್ಮೆ ಹೆದೆಗೇರಿಸಿದವೋಘಾಸ್ತ್ರವದನು
ನೋಡುತ್ತಲುಸುರಿದನು ಹರಸೂನುಸನ್ನಿಭನು
ಕರುಣಾರ್ದ್ರಚೇತಸನು ದಶರಥಾತ್ಮಜನು.

೮೪

ನನ್ನನಭಿಭವಗೊಳಿಸಿದೀನಿನ್ನ ನಿರ್ದಯದೆ
ಕೊಲಲಾರೆ ಪಾರ್ವನೆನುವೀಯೊಂದು ಕತದೆ
ಶರಕೆ ಲಕ್ಷ್ಯವನರುಹು ಚಲನೆಯನೆ ಅಳಿಯಿಸಲೊ
ಮೇಣ್ ಮಖಾರ್ಜಿತಲೋಕದಧ್ವವನೆ ಸುಡಲೊ.

೮೫

ತತ್ವತಃ ನಿನ್ನನು ಪುರಾಣಪುರುಷೋತ್ತಮನು
ಎನುವುದನು ತಿಳಿಯದವನೇನಲ್ಲ ನಾನು
ಭುವಿಗಿಳಿದ ವೈಷ್ಣವದ ತೇಜವನು ನಿರುಕಿಸಲು
ನಾಂ ಗೈದೆನಿಂತು ನೀಂ ಕುಪಿತನಾಗುವೊಲು.

೮೬

ಅಯ್ಯನರಿಗಳನಂದು ಸಿಟ್ಟಿನುರಿಯೊಳು ಸುಟ್ಟು
ಕಡಲುಡೆಯ ಮೇದಿನಿಯ ಸಜ್ಜನಕೆ ಕೊಟ್ಟು
ಕೃತಕೃತ್ಯನಾದೆನಗೆ ಪರಮೇಷ್ಠಿ ನಿನ್ನಿಂದೆ
ಸೋಲಾದರೂ ಶ್ಲಾಘ್ಯವೆಂದೆನಿಸ್ವದಿಹುದೆ !

೮೭

ವರತೀರ್ಥಯಾತ್ರೆಯನು ಬಯಸಿದೆನ್ನಧ್ವವನು
ಮತಿಯುತರೊಳುತ್ತಮನೆ ಪೊರೆವುದಯ್ ನೀನು
ಸುರಲೋಕಪಥವ ನೀಂ ತಡೆವೆಯೆಂದೆನುವುದದು
ಭೋಗಲೋಲುಪನಲ್ಲದೆನ್ನನಳಲಿಸದು.

೮೮

ಅಂತಾಗಲೆಂದಿಂದ್ರದಿಙ್ಮುಖನು ರಾಘವನು
ಮಾರ್ಗಣವನೊಂದನೆಳೆದೆಚ್ಚನಂದವನು
ನಿಜಸುಕೃತವಿರಲೇನು ಭಾರ್ಗವನು ಪುಗದವೊಲು
ಸುರಪಥಕೆ ತಡೆಯಾದುದಂಬು ಪರಿಘದೊಲು.

೮೯

ಆ ತಪೋನಿಧಿಯ ಪದಕಮಲಗಳಿಗೆರಗಿದನು
ಕ್ಷಮಿಸುವುದು ನೀನೆಂದು ದಶರಥಾತ್ಮಜನು
ಶಕ್ತಿಜಿತರಿಪುಗಳೊಳು ವಿನಯವನು ತೋರುವುದೆ
ವೀರರಿಗೆ ಕೀರ್ತಿಕರವೆನ್ನಿಸದೆ ಜಗದೆ.

೯೦

ತಾಯ ಕಡೆಯಿಂ ಬಂದ ರಾಜಸವ ನೀಂ ಕಳೆದು
ತಂದೆ ಕಡೆಯಿಂ ಬಂದ ಶಾಂತಗುಣಕೆಳೆದು
ನೀಂ ನೆಗಳಿದನವದ್ಯಫಲದೊಂದು ನಿಗ್ರಹವೆ
ನನಗನುಗ್ರಹವಾದುದಲ್ತೆ ಹೇ ಗುರುವೆ.

೯೧

ಸುರಕಾರ್ಯಸಿದ್ಧಿಯೊಳು ತೊಡಗಿರುವ ನಿನಗಿಂದು
ವಿಘ್ನಗಳು ಬರದಿರಲಿ ತೆರಳುವೆನು ಎಂದು
ಲಕ್ಷಣಾನ್ವಿತಲಕ್ಷ್ಮಣಾಗ್ರಜನಿಗಿಂತೊರೆದು
ಭಾರ್ಗವನು ತಾಂ ತಿರೋಹಿತನಾದನಂದು.

೯೨

ಅಂತು ಭಾರ್ಗವನತ್ತ ತೆರಳಲು
ವಿಜಯಿರಾಮನನೆದೆಯೊಳವಚುತ
ಮರಳಿ ಮಗನನು ಪಡೆದವೊಲು ಪಿತನವನನಪ್ಪಿದನು
ಒಂದು ಚಣದೊಳು ದುಃಖದುರಿಯೊಳು
ಸಿಲುಕಿ ಮರುಚಣ ನಲವನಾಂತುದು
ಕಾಡುಕಿಚ್ಚಿನೊಳುರಿದ ವೃಕ್ಷಕೆ ಮಳೆಯು ಬಿದ್ದವೊಲಾದುದು.

೯೩

ದಾರಿಯೆಡೆಯ ರಮ್ಯಪಟಗೃಹಂಗಳಲ್ಲಿ ಕಳೆಯುತಿರುಳನು
ಪಯಣಗೈದು ಶರ್ವಕಲ್ಪನೃಪತಿಲಕನು ಬಂದು ಪೊಕ್ಕನು
ಮೈಥಿಲಿಯನು ನೋಡಲೆಳಸಿದಾ ಪುರಾಂಗನೆಯರ ಓಳಿಯ
ಅಕ್ಷಿಕುವಲಯಂಗಳಿಹ ಗವಾಕ್ಷಚಯದೆ ಮೆರೆವಯೋಧ್ಯೆಯ.



## ಹನ್ನೆರಡನೆಯ ಸರ್ಗ

# ರಾವಣಸಂಹಾರ

೧

ಬಳಿಕ ವಿಷಯಸ್ನೇಹಭುಕ್ತನು ದಶಾಂತವನು ಪೊರ್ದಿದವನಿಪನು
ಪೊಳ್ತರೆಯ ದೀಪದುರಿವೋಲಾದನಾಸನ್ನನಿರ್ವಾಣನವನು.

೨

ಕಿವಿಯ ಬಳಿಯೊಳು ಬಂದು ರಾಮನೊಳು ಸಿರಿಯನಿರಿಸೆಂದವನೊಳಂದು
ಕೈಕೆಯನು ಶಂಕಿಸುತೆ ಜರೆಗೂದಲಿನ ನೆವದೆ ಜರೆಯೊರೆದಳೊಲಿದು.

೩

ಪೌರಜನಕಾಂತನಾದಾರಾಮನಭ್ಯುದಯ ವಾರ್ತೆಯೆಲ್ಲರನು
ಮುದಗೊಳಿಸಿತಂದು ಮುದಗೊಳಿಪಂತೆ ಕಲ್ಯಮುದ್ಯಾನವೃಕ್ಷವನು.

೪

ಕ್ರೂರನಿಶ್ಚಯೆ ಕೈಕೆ ಆಣಿಗೊಳಿಸಿದಭಿಷೇಕಸಂಭಾರಗಳನು
ಶೋಕೋಷ್ಣಮಾದಂಥ ಪಾರ್ಥಿವಾಶ್ರುಗಳಿಂದ ಮಲಿನಗೊಳಿಸಿದಳು.

೫

ಭರ್ತನಿಂದನುನೀತಳಾಚಂಡಿ ಮುಂ ಪಡೆದ ವರವೆರಡನಂದು
ಕಾರುವೋಲಿಂದ್ರನಿಂ ನಾಂದವನಿ ಬಿಲಮುಖದಿನೆರಡಹಿಯನುಗಿದು ;

೬

ಒಂದರಿಂದಬ್ದಮೀರೇಳರ ಅರಣ್ಯವಾಸವ ರಾಮಗೆರೆದಳ್
ಮತ್ತೊಂದರಿಂದೆ ವೈಧವ್ಯೈಕಫಲವ ಸಂಪದವ ಸುತಗೆರೆದಳ್.

೭

ರಾಮನಂದಾವೊದಲು ರೋದಿಸುತ ಕೊಂಡಿರ್ದನಯ್ಯನಿತ್ತಿಳೆಯ
ನಗುನಗುತೆ ಪಡೆದನಹ ವನಕೆತೆರಳೆಂದೊರೆಯುವಯ್ಯನಾಣತಿಯ.

೮

ಮಂಗಲಕ್ಷೌಮವನು ಧರಿಸಿದಂದೆಂತಂತು ವಲ್ಕದೊಳಂಮು
ಒಂದೆ ತೆರನಿರುವ ಮುಖರಾಗವನು ನೋಡಿದರು ಬೆರಗಾಗಿ ಜನರು.

೯

ಸೀತೆಲಕ್ಷ್ಮಣರೊಡನೆ ಜನಕನನು ಸತ್ಯವಿಚ್ಯುತನೆನಿಸದವನು
ಸಾಧುಜನಮುನಿಮುಮಂ ದಂಡಕಾರಣ್ಯಮುಮನೊಳಪೊಕ್ಕನವನು.

೧೦

ಆವಿಯೋಗಾರ್ತನೃಪನಾತ್ಮಕರ್ಮದೊಳಾದ ಶಾಪವನು ನೆನೆದನ್
ತಚ್ಛರೀರತ್ಯಾಗ ಸಂಸ್ಕರಣಮಾತ್ರದೊಳೆ ಸಂಸ್ಕರಣಲಾಭವನು ಬಗೆದನ್.

೧೧

ಮಕ್ಕಳುಗಳೈದಿರುವ ರಾಜನಿರದಳಿದಿರುವ ರಾಜ್ಯವದನಂದು
ಭೋಗಿಸಲ್ಕೆಳಸಿರ್ದರಿತ್ತ ರಂಧ್ರಾನ್ವೇಷಣಕ್ರಮರು ಶತ್ರುಗಳು.

೧೨

ಬಳಿಕ ತಬ್ಬಲಿ ಸಚಿವರಬ್ಬೆಕಡೆ ನೆಂಟರೊಳು ಇರ್ದ ಭರತನನು
ಕರೆಯಲೆಂದಟ್ಟಿದರು ಧೃತಿಯಿಂದೆ ಕಂಬನಿಯ ತಡೆಯುವಾಪ್ತರನು.

೧೩

ತನ್ನಯ್ಯನಾತೆರದೊಳಳಿದುದನು ಕೇಳ್ದಂದು ಕೈಕೆಯಾತ್ಮಜನು
ಜನನಿಯೊಳು ಮಾತ್ರಮಲ್ತಾರಾಜ್ಯರಮೆಯೊಳುಂ ಮೊಗದಿರುಹಿಸಿದನು.

೧೪

ತೋರುತಿರೆ ತಾಪಸರು ಸೌಮಿತ್ರಿವೆರಸಣ್ಣನಿರ್ದ ಮರಗಳನು
ನೋಡಿ ಕಂಬನಿಗರೆದು ಪಡೆವರೆಸು ರಾಮನನು ಭರತನರಸಿದನು.

೧೫

ಗುರುಮರಣವಾರ್ತೆಯನು ಚಿತ್ರಕೂಟಾಟವಿಯೊಳಿರುವವನಿಗೊರೆದು
ಬೇಡಿದನು ಆ ರಾಜ್ಯಲಕ್ಷ್ಮಿಯನು ಅನನುಭುಕ್ತೆಯನು ವರಿಸೆಂದು.

೧೬

ಪ್ರಥಮಜನು ಶ್ರೀಯನು ಪರಿಗ್ರಹಿಸದಿರುವಂದು ಆತನಿಂ ಮುನ್ನಂ
ಸಾನದನು ತಳೆವಂದು ಪರಿವೇತ್ತೃವೆನಿಸುವೆನು ಎಂದರಿವೆನೆನ್ನಂ.

೧೭

ಸ್ವರ್ಗಸ್ಥ ಜನಕನೊಂದಾಜ್ಞೆಯಿಂ ತಿರುಗಿಸಲ್ಕಿರದೆನಿಪ್ಪನನು
ಬಳಿಕ ರಾಜ್ಯಾಧಿದೇವತೆಗಳಂ ಗೈಯಲೆರೆದನು ಪಾದುಕೆಯನು.

೧೮

ಅಂತಾಗಲೆಂದೊರೆಯಲಣ್ಣನಿಂ ಬೀಳ್ಕೊಂಡು ಪುಗದೆ ನಿಜಪುರಿಯ
ನಂದಿಯೆಂಬೂರಿನೊಳು ನೆಲಸಿ ನಿಕ್ಷೇಪದೊಲು ಪೊರೆದನವನಿಳೆಯ.

೧೯

ಅಣ್ಣನೊಳು ದೃಢಭಕ್ತಿಯಿಟ್ಟಿಂತು ಬಿಟ್ಟು ಸಲೆ ರಾಜ್ಯತೃಷ್ಣೆಯನು
ಜನನಿಗೈದಘಕೆ ಪರಿಹಾರಕೃತಿಗೈವಂತೆವೋಲ್ ಭರತನಿಹನು.

೨೦

ಕಂದಮೂಲವನುಣುತೆ ರಾಮನುಂ ವೈದೇಹಿವೆರಸು ಸಾನುಜನು
ಹರೆಯದೊಳೆ ಇಕ್ಷ್ವಾಕುವೃದ್ಧರ ವ್ರತಂಗಳನು ಶಾಂತನಾಂತಿಹನು.

೨೧

ಒರ್ಮೆ ನಿಜಮಹಿಮೆಯಿಂದೊಂದು ತರುಛಾಯೆಯನು ಚಲಿಸದೊಲು ಗೈದು
ಸೀತೆಯುತ್ಸಂಗದೊಳು ನಸುಬಳಲಿದಾರಾಮನಿನಿಸೊರಗಿದಂದು,

೨೨

ನಖಗಳಿಂದವಳಕುಚಯುಗಳವನು ಬಗೆದುದಂದೊಂದೈಂದ್ರಪಕ್ಷಿ
ಪ್ರಿಯನ ಆ ಉಪಭೋಗಚಿಹ್ನೆಯೊಳು ದೋಷಗಳ ಬೆದಕಿತೋರ್ಪಂತೆ.

೨೩

ರಾಮಾವಬೋಧಿತನು ರಾಮನು ಇಷೀಕಾಸ್ತ್ರದಿಂದೆಚ್ಚನದನು
ಕಣ್ಣೊಂದನಿತ್ತದರಿನುಳಿಸಿಕೊಂಡಿರ್ದುದದು ತನ್ನ ಜೀವನನು.

೨೪

ಆಸನ್ನದೇಶವನು ಮತ್ತೆ ಭರತಾಗಮನ ಶಂಕೆಯಿಂದವನು
ಉತ್ಸುಕಿತ ಹರಿಣಿಯುತ ಚಿತ್ರಕೂಟಸ್ಥಲಿಯನುಳಿದು ರಾಘವನು.

೨೫

ಆತಿಥೇಯರ್ಕಳೆನಿಸಾ ಋಷಿಗಳಾಶ್ರಮದೊಳವನು ನೆಲಸಿರುತೆ
ತೆಂಕಣಕೆ ತೆರಳಿದನು ಮಳೆಯ ನಕ್ಷತ್ರಗಳಲಿರ್ದ ರವಿಯಂತೆ.

೨೬

ರಾಜಿಸಿದಳವನನನುಸರಿಸುವ ವಿದೇಹಾಧಿಪನ ಪುತ್ರಿ ಸೀತೆ
ಕೈಕೆ ಬೇಡೆಂದರೂ ಬಳಿಸಂದ ವರಗುಣೋನ್ಮುಖಿ ಲಕ್ಷ್ಮಿ ಶ್ರೀಯಂತೆ.

೨೭

ಅನಸೂಯೆ ತನಗಿತ್ತ ಅಂಗರಾಗದ ಪುಣ್ಯಗಂಧದಿಂದವಳು
ಹೂವನುಳಿದೈತಂದ ದುಂಬಿಗಳಿನಡವಿಯನು ಸಲೆ ತುಂಬಿಸಿದಳು.

೨೮

ಸಂಧ್ಯಾಭ್ರಕಪಿಶನು ವಿರಾಧನೆನುವೋರ್ವ ರಾಕ್ಷಸನೆದುರು ನಿಂದು
ರಾಮಪಥವನು ಕವಿದನಿಂದುವನು ರಾಹು ಕವಿದಡ್ಡಗಟ್ಟುವೊಲು.

೨೯

ಅವರ ನಡುವಿರ್ಪ ವೈಥಿಲಿಯನಪಹರಿಸಿದನು ಲೋಕಶೋಷಕನು
ಒಯ್ವವೋಲವಗ್ರಹವು ಆ ನಭೋಭಾದ್ರಪದಮಧ್ಯವೃಷ್ಟಿಯನು.

೩೦

ಕಾಕುತ್ಸ್ಥರಾತನನು ಕೊಂದು ಮುಂದವನ ದುರ್ಗಂಧದಿಂದಿಳೆಯ
ನಿರ್ಮಲತೆಯಳಿವುದೆಂದಾಳದೊಳು ಹೂಳಿದರು ಆಗೆದಡವಿಯೆಡೆಯ.

೩೧

ಕುಂಭಜನ ಶಾಸನದೆ ವಿಂಧ್ಯೆ ಪೂರ್ವಾವಸ್ಥೆಯೊಳೆ ನೆಲಸಿದಂತೆ
ಪಂಚವಟಿಯೊಳು ರಾಮ ನೆಲಸಿದನು ಮರ್ಯಾದೆಯನು ದಾಂಟದಂತೆ.

೩೨

ರಾಘವನ ಬಳಿಸಾರ್ದಳಲ್ಲಿ ಮದನಾತುರಳು ರಾವಣನ ತಂಗಿ
ಚಂದನವ ಸಾರುವೊಲು ಬೇಸಗೆಯ ಸೆಕೆಯುರಿಯೊಳುರೆಬೆಂದ ಉರಗಿ.

೩೩

ಜನಕಸುತೆಯಿದಿರಿನೊಳೆ ರಾಮನನು ಬಯಸಿದಳು ಅನ್ವಯವನೊರೆದು
ಸಲೆ ಬೆಳೆದ ನಾರೀಮನೋಭವನನು ಕಾಲವನು ತಾನರಿಯನಲ್ತೆ.

೩೪

ನನಗೆ ಹೆಂಡತಿ ಇಹಳು ತಮ್ಮನನು ಭಜಿಸು ಎಲೆ ಬಾಲೆ ಹೋಗೆಂದು
ಅಟ್ಟಿದನು ಆ ವೃಷಸ್ಯಂತಿಯನು ರಾಮನು ವೃಷಸ್ಕಂಧನಂದು.

೩೫

ಹಿರಿಯನನು ಆ ಮೊದಲೆ ಸಾರ್ದೆಯೆಂದಾ ಕಿರಿಯನುಂ ಅವಳನುಳಿಯೆ
ಇರ್ತಡಿಯ ಸೋಂಕುತಿಹ ತೊರೆಯವೊಲು ಮರಳಿ ರಾಮಾಶ್ರಯಕೆ ಸುಳಿಯೆ

೩೬

ರಾಕ್ಷಸಿಯ ಕ್ಷಣ ಸೌಮ್ಯದಾಕೃತಿಯ ಚಲಿಸಿದುದು ಹಾಸ ಮೈಥಿಲಿಯ
ಆ ನಿವಾತಸ್ತಿಮಿತದಂಬುಧಿಯ ವಿಕ್ಷೋಭಿಪಂತೆ ಶಶಿಯುದಯ.

೩೭

ಸಧ್ಯದೊಳೆ ಪಡೆವೆ ನಿನ್ನುಪಹಾಸಫಲವನೆಲೆ ನೋಡೆನ್ನ ಪೆರ್ಮೆ
ಹೆಣ್ಣು ಹುಲಿಯನು ಹುಲ್ಲೆ ಪರಿಭವಿಸಿದಂತೆಂದು ತಿಳಿ ನಿನ್ನ ಗೆಯ್ಮೆ.

೩೮

ನಲ್ಲನುತ್ಸಂಗದೊಳು ಭಯದಿಂದಲುಡುಗಿದವನಿಜೆಯನಿಂತೊರೆದು
ಶೂರ್ಪಣಖಿ ತಾಳಿದಳು ಪೆಸರಿಗೊಪ್ಪುವ ತನ್ನ ವಿಕೃತರೂಪವನು.

೩೯

ಕೋಗಿಲೆವೊಲಿನಿದನಿಯ ನುಡಿದವಳು ಶಿವೆಯವೊಲು ಕಿರುಚುತಿರಲಂದು
ಸೌಮಿತ್ರಿಯೆಣಿಸಿದನು ಕರ್ಕಶಧ್ವನಿಯವಳು ವಿಕೃತಿ ದಲ್ ಎಂದು.

೪೦

ಲಕ್ಷ್ಮಣನು ಒರೆದೆಗೆದ ಖಡ್ಗವಿಡಿದೊಳವೊಕ್ಕು ಪರ್ಣಶಾಲೆಯನು
ರಾಕ್ಷಸಿಯನೊಡನಿಕ್ಕಿ ಭೀಷಣಾಕೃತಿಯ ತಾಂ ದ್ವಿಗುಣಗೊಳಿಸಿದನು.

೪೧

ಕೊಂಕಿರುವ ಕೂರುಗುರ ಬಿದಿರವೊಲು ಬೆಟ್ಟಿತಹ ಗಿಣ್ಣುಗಳಿನೆಸೆವ
ಅಂಕುಶನಿಭಾಂಗುಳಿಯಿನಂಜಿಸಿದಳಂಬರದೊಳಿರ್ವರುಮನವಳು.

೪೨

ಬೇಗನೆ ಜನಸ್ಥಾನವನು ಸಾರ್ದು ರಾಮನಿಂದಾವಿಧದೊಳಾದ
ಕಥೆಯನಂದೊರೆದಳು ಖರಾದಿಗಳಿಗಂಥ ರಾಕ್ಷಸಪರಾಭವದ.

೪೩

ಮೋರೆಕಿವಿಮೂಗುಗಳ ಕೊಯ್ಸಿಕೊಂಡಿರುವಳನು ಮುಂದಿರಿಸಿ ಬಂದು
ರಾಮಾದಿಗಳನಂದು ತಾಂಗಿದುದೆ ತಾನಮಂಗಳವಾದುದಹುದು.

೪೪

ಕೈದುವಿಡಿದೆತ್ತಿಬರ್ಪುದ್ಧತಖರಾದಿಗಳ ನೋಡಿ ರಾಘವನು
ಇರಿಸಿದನು ಲಕ್ಷ್ಮಣನೊಳಿನಿಯಳನು ಚಾಪದೊಳು ವಿಜಯದಾಶೆಯನು.

೪೫

ದಾಶರಥಿಯೊರ್ವನಯೆ ರಾಕ್ಷಸರೊ ಸಾವಿರಾರಿರ್ದೊಡಂ ಧುರದೆ
ತಮ್ಮನಿತೆ ಸಂಖ್ಯೆಯಿಂದಿರ್ಪ ರಾಮರ್ಕಳನು ನೋಡಿದರು ಭರದೆ.

೪೬

ಸಹಿಸನು ರಘೂದ್ವಹನು ದುರ್ಜನರು ಕಳುಹಿಸಿದ ದೂಷಣಾಖ್ಯನನು
ಸಹಿಸದೊಲು ದುರ್ಜನರ ದೂಷಣಮನಾಶುಭಾಚಾರರತನವನು.

೪೭

ಸರಿವಿಡಿಯ ಶರಗಳಿಂದಾಖರತ್ರಿಶಿರರೊಡನಾತನುಮನಿರಿಯೆ
ಚಾಪದಿಂದೇಕಕಾಲದೊಳೆ ಮುಕ್ಕಣೆಗಳುಂ ಬಂದುವೆನಲೆಸೆಯೆ.

೪೮

ಮೂರು ಕೂರಂಬುಗಳು ದೇಹವನೆ ಸೀಳಿದರು ಮೊದಲ ಶೌಚವನು
ಮೆರೆಯುತವರಾಯುವನ್ನೀಂಟಿದವು ಪಕ್ಕಿಗಳಿಗುಳಿಸಿ ನೆತ್ತರನು.

೪೯

ರಾಮಶರ ತರಿದೊಡ್ಡಿದಸುರಸೇನಾಬಲದೊಳೀಕ್ಷಿಸುವೊಡಂದು
ನಿಂದುದು ಕಬಂಧಾಳಿ ಇಲ್ಲವಿನಿತಿನ್ನೆಂಬ ತೆರದೆ ಬೇರೊಂದು.

೫೦

ಬಾಣಗಳ ಮಳೆಗರೆವ ರಾಮನನು ಕೆಣಕಿ ರಣಕೆಳಸಿದರಿಬಲವು
ಪರ್ದುಗಳ ನೆರಳಿನೊಳಗೊರಗಿದುದು ಮತ್ತೇಳದಂಥ ನಿದ್ರೆಯೊಳು.

೫೧

ರಾಮಾಸ್ತ್ರಹತದೈತ್ಯಸೇನೆಯೊಳು ಶೂರ್ಪಣಖಿಯೊರ್ವಳೆಯೆ ಉಳಿದು
ಆ ದುಷ್ಟವಾರ್ತೆಯನು ರಾವಣನಿಗೊರೆವ ದೂತಿವೊಲಾದಳಂದು.

೫೨

ತಂಗೆಯನು ದಂಡಿಸುತಲಾತೆರದೆ ದಾಶರಥಿ ಬಾಂಧವರ ಕೊಂದು
ಈರೈದು ಮುಡಿಗಳಲಿ ಅಡಿಯಿಟ್ಟನೆಂದೆ ಧನದಾನುಜನು ಬಗೆದು;

೫೩

ಮೃಗರೂಪಿಯಸುರನಿಂ ರಾಘವರ ವಂಚಿಸುತೆ ಸೀತೆಯನು ಕಳ್ದು
ಪಕ್ಷೀಂದ್ರನಾಹವದೆ ಕ್ಷಣ ಮಾತ್ರ ವಿಘ್ನಿತನು ತಾನೊಯ್ದನಂದು.

೫೪

ಸೀತೆಯನು ಪುಡುಕುತಿರುವಿರ್ವರುಂ ಕಂಡರದೊ ಗರಿತರಿದ ಪರ್ದ
ಮಿತ್ರಋಣಪರಿಹಾರಕೆಂದು ಕಂಠಾರ್ಪಿತ ಪ್ರಾಣನಾಗಿರ್ದ.

೫೫

ರಾಘವನು ಸೀತೆಯನು ಕಳ್ದೊಯ್ದನೆಂದವರಿಗೊರೆದನು ಜಟಾಯು
ಸಾತಿಶಯ ಸಾಹಸವನೇರ್ಗಳಿಂದರುಹುತ್ತೆ ಬಿಳ್ದನು ಗತಾಯು.

೫೬

ಅಯ್ಯನಳಿವಿನೊಳಾದ ಅಳಲು ಮರುಕಳಚಿತೆನಲಂದು ರಾಘವರು
ತಂದೆಗೆಂತಂತದಕೆ ವಹ್ನಿಕ್ರಿಯಾದಿಗಳ ವಿರಚಿಸಿದರವರು.

೫೭

ವಧೆಯಿಂದೆ ನಿರ್ಧೂತಶಾಪನು ಕಬಂಧನೊರೆದುಪದೇಶದಿಂದೆ
ಸಮದುಃಖಿ ಸುಗ್ರೀವನೊಳ್ ದಾಶರಥಿಗೆ ಕೆಳೆತನ ಬೆಳೆದುದಂದೆ.

೫೮

ವಾಲಿಯನು ವೀರರಾಮನು ಕೊಂದು ಬಹುದಿನದಿನೆಳಸಿರ್ದ ಪದದೆ
ಧಾತುವಿನ ನೆಲೆಯೊಳಾದೇಶದೊಲು ನಿಲಿಸಿದನು ಮಿತ್ರನನು ಮುದದೆ.

೫೯

ಜಾನಕಿಯನರಸಿರೆಂದೊಡೆಯನಾಣತಿ ಈಯಲತ್ತಿತ್ತ ಕಪಿಗಳ್
ಸುತ್ತಿದವು ಸುತ್ತುವೊಲು ವಿರಹಾರ್ತ ರಾಘವನ ಆ ಮನೋರಥಗಳ್.

೬೦

ಸಂಪಾತಿಮುಖದಿಂದೆ ಸುದ್ದಿಯ ವಿಶೇಷವನು ತಿಳಿಯುತವನಿಜೆಯ
ನಿರ್ಮಮನು ಸಂಸ್ಕೃತಿಯ ದಾಂಟುವೊಲು ದಾಂಟಿದನು ಹನುಮನಂಬು
ಧಿಯ.

೬೧

ಲಂಕೆಯೊಳಗರಸುತಿರೆ ದನುಜೆಯರ ಬಳಸಿನೊಳು ಕಂಡನಂದವನು
ವಿಷವಲ್ಲಿಗಳ ನಡುವೆ ಎಸೆಯುವ ಮಹೋಷಧಿವೊಲಿರುವವನಿಜೆಯನು.

೬೨

ಪತಿಯಭಿಜ್ಞಾನಾಂಗುಳೀಯಕವನಾ ಹನುಮನವಳಿಗಿತ್ತುದನು
ಶೀತಳಾನಂದಾಶ್ರುಬಿಂದುಗಳಿನಿದಿರ್ಗೊಂಡಳವನಿಸುತೆಯದನು.

೬೩

ಪ್ರಿಯನ ಸಂದೇಶದಿಂದವನಿಜೆಯ ಸುಖಗೊಳಿಸುತಕ್ಷನನು ಕೊಂದು
ಕ್ಷಣಕಾಲ ಸಹಿಸುತರಿನಿಗ್ರಹವನುರುಹಿ ಲಂಕೆಯನಣುವ ಬಂದು;

೬೪

ತಾನಾಗಿ ಮೂರ್ತಿವೆತ್ತೈತಂದ ಜಾನಕಿಯ ಹೃದಯವೆನಲಿರುವ
ಪ್ರತ್ಯಭಿಜ್ಞಾನರತ್ನವನು ರಾಮನಿಗಿತ್ತ ಕೃತಕೃತ್ಯನಣುವ.

೬೫

ಎದೆಗಪ್ಪು ತಾಮಣಿಯ ಸೋಂಕುಸೊಗದಿಂದಲರೆಗಣ್ಮುಚ್ಚು ತವನು
ಮೊಲೆಯ ಸೋಂಕಿಲ್ಲದಿರುವಿನಿಯಳಪ್ಪುಗೆಯ ಸೊಗವಡೆದನಂದವನು.

೬೬

ತನ್ನ ಹೃದಯೇಶ್ವರಿಯ ವಾರ್ತೆಯನು ಕೇಳ್ದು ತತ್ಸಂಗವೋತ್ಸುಕನು
ಲಂಕೆಯನು ಬಳಸಿದ ಮಹೋದಧಿಯ ಲಘುಪರಿಖೆಯೆನೆ ಭಾವಿಸಿದನು.

೬೭

ನೆಲದೊಳಲ್ಲದೆ ಮತ್ತೆ ಬಾನಿನೊಳಮಿಟ್ಟಳಿಸಿ ಸೇನೆ ಮುನ್ನಡೆಯೆ
ರಾಘವನು ಹರಿಸೇನೆಯೊಡನೆ ಪೊರಮಟ್ಟನರಿನಾಶವನು ಪಡೆಯೆ.

೬೮

ಕಡಲತಡಿಯೊಳು ನೆಲಸಿದಾತನನು ಸಾರಿದನು ಆ ವಿಭೀಷಣನು
ರಾಕ್ಷಸಶ್ರೀಯೆ ತಾನಟ್ಟಿದಳು ಬುದ್ಧಿವೇಳ್ದಕ್ಕರೆಯಿನೆನಲು.

೬೯

ರಾಮನು ವಿಭೀಷಣನಿಗಸುರರೈಶ್ವರ್ಯವನು ಕೊಡಲಂದು ಪೂರ್ಣ್ಣನ್
ತಕ್ಕ ಕಾಲದೊಳುಪಕ್ರಮಗೊಂಡ ನೀತಿಗಳು ಕುಡವೆ ಸತ್ಫಲಮನ್.

೭೦

ಶಾರ್ಙ್ಗ ಪವಡಿಸಲೆಂದು ಶೇಷನು ರಸಾತಲದಿನೆಳ್ದ ಮಾಳ್ಕೆಯೊಳು
ಕಪಿಗಳಿಂ ಕಟ್ಟಿಸಿದನೊರ್ಮಹಾ ಸೇತುವನು ದಕ್ಷಿಣಾಬ್ಧಿಯೊಳು.

೭೧

ಸೇತುವೆಯಿನುತ್ತರಿಸುತಬ್ಧಿಯನು ಮುತ್ತಿದನು ರಾಮ ಲಂಕೆಯನು
ಕಟ್ಟುವೋಲರಿಸಿನದ ಕಪಿಗಳಿಂದೆರಡನೆಯ ಕನಕ ಕೋಟೆಯನು

೭೨

ಮಸಗಿದುದು ಲಂಕೆಯೊಳು ಭೀಮರಣಮಾಪ್ಲವಗ ರಾಕ್ಷಸರ್ಕಳೊಳು
ಕಾಕುತ್ಸ್ಥ ಪೌಲಸ್ತ್ಯ ಘೋಷಣಗಳಳರುತಿರೆ ದಿಕ್ಕುದಿಕ್ಕಿನೊಳು.

೭೩
ಶಿಲೆಗಳಿಂ ಮುದ್ಗರಗಳನ್ನೊಡೆದು ಮರಗಳಿಂ ಪರಿಘೆಗಳ ಮುರಿದರ್
ನಖಘಾತದಿಂದಸ್ತ್ರಗಳ ಮುರಿದು ಕರಿಗಳನು ಗಿರಿಗಳಿಂದಿರಿದರ್.

೭೪
ರಾಘವಶಿರಚ್ಛೇದದರ್ಶನೋದ್ಭ್ರಾಂತ ಚೇತನೆಯನವನಿಜೆಯ
ತ್ರಿಜಟೆ ಸಂತೈಸುತುಜ್ಜೀವಿಸಿದಳಿದು ಮಾಯೆ ನಿಜವಲ್ಲವೆನುತೆ.

೭೫
ಬದುಕಿರುವನಿನಿಯನಿದು ದಿಟವೆಂದು ಬಳಿಕ ಜಾನಕಿಯಳಲನುಳಿದು
ನಾಚಿದಳು ಇನಿಯನಳಿವಿನ ಸುದ್ದಿ ಕೇಳ್ದುಮುಳಿದಿರ್ದೆನಾನೆಂದು.

೭೬
ಗರುಡನಾಗಮನದಿಂ ವಿಶ್ಲಿಷ್ಟ ಮೇಘನಾದಾಸ್ತ್ರಬಂಧನರು
ತತ್‌ಕ್ಷಣಕ್ಲೇಶವನು ಕನಸಂತೆ ಕಳೆದರಂದುಭಯ ರಾಘವರು.

೭೭
ರಾವಣನು ಶಕ್ತಿಯಿಂದೆಚ್ಚನಾ ಲಕ್ಷ್ಮಣನುರಸ್ಥಲವನೊಡೆದು
ರಾಘವನನಾಹತನುಮಧಿಕಶೋಕದೆ ನಿಂದನಂದು ಎದೆಯೊಡೆದು.

೭೮
ಪವನಜನು ತಂದ ಸಂಜೀವಿನಿಯೊಳಳಲು ಕಳೆದಂಥ ಲಕ್ಷ್ಮಣನು
ಲಂಕಾಪುರಂಧ್ರಿಯರಿಗಂಬುಗಳಿನಳುಗಲಿಪ ಓಜನೆನಿಸಿದನು.

೭೯
ಸುರಚಾಪದಂತೆಸೆವ ಮೇಘನಾದನ ಧನುವ ಮೇಣದರ ರವಮುನ್
ಸೌಮಿತ್ರಿಯಳಿಸಿದನು ಮಳೆವಿಲ್ಲು ಮೊಳಗುಗಳ ಮುರಿವ ಶಾರದದೊಲ್.

೮೦
ಕುಂಭಕರ್ಣನಿಗೆಸಗಲನುಜೆಗೆಣೆಯಪ್ಪ ದೆಶೆಯನು ಕಪೀಶ್ವರನು
ರಾಮನನು ಹೋರಿದನು ಟಂಕವಿದಳಿತಮಣಿಶಿಲಾಶೃಂಗನಿಭನು.

೮೧

ಅಣ್ಣನೆಚ್ಚರಿಸಿದನಕಾಲದೊಳು ಪ್ರಿಯನಿದ್ರನನು ನಿನ್ನನೆಂದು
ದೀರ್ಘನಿದ್ರೆಯನಿತ್ತುದಾಕುಂಭಕರ್ಣಂಗೆ ರಾಮುಶರಮಂದು.

೮೨

ಕೋಟಿ ಕಪಿಗಳ ನಡುವೆ ಮಿಕ್ಕರಕ್ಕಸರೆಲ್ಲರಲ್ಲಲ್ಲಿ ಕೆಡೆದರ್
ರಣಸಮುತ್ಥಿತ ರಜಗಳವರ ಮೈನೆತ್ತರಿನ ತೊರೆಯೊಳದ್ದಂತೆ.

೮೩

ಮರಳಿ ಕಾಳಗಕೆಂದು ಪೌಲಸ್ತ್ಯನೈದಿದನು ಮಂದಿರಮನುಳಿದು
ಜಗಮಿಂದರಾವಣಂ ಮೇಣರಾಮಂ ಅಕ್ಕೆ ಎಂದು ತರಿಸಂದು.

೮೪

ರಾಘವನು ನೆಲದ ಮೇಲಿರ್ದುದನು ರಾವಣನು ರಥವನೇರ್ದುದನು
ಕಂಡಶ್ವಯುಗ್ಮಯುತ ಸುರರಥವ ದಾಶರಥಿಗಿಂದ್ರನಟ್ಟಿದನು.

೮೫

ಸುರನದಿಯ ತೆರೆಗಾಳಿ ಮಿಳಿರ್ದು ಮಿಳ್ಳಿಸುತಿರುವ ಬಾವುಟದಿನೆಸೆವ
ವಿಜಯರಥವೇರಿದನು ದೇವಸೂತಕರಾವಲಂಬಿರಾಘವನು.

೮೬

ಸೋಂಕಿದೊಡನಸುರಶಸ್ತ್ರಂಗಳುತ್ಪಲದಳಕ್ಕೈಬ್ಯತೆಯ ತಳೆವ
ಇಂದ್ರನ ತನುಚ್ಛದವ ತೊಡಿಸಿದನು ರಾಘವನಿಗಮರಸಾರಥಿಯು.

೮೭

ತಂತಮ್ಮ ವಿಕ್ರಮುವ ಮೆರೆಯಲ್ಕೆ ಬಹುಕಾಲಕವಕಾಶ ದೊರೆಯೆ
ರಾಮ ರಾವಣರ ರಣಮಾದತ್ತು ಚರಿತಾರ್ಥಮಾದವ್ಪೋಲೆಸೆಯೆ.

೮೮

ತೋಳು ತಲೆ ಹೆಗಲುಗಳ ಹೆಚ್ಚಳದೊಳೊಂಟಿಯಾಗಿರ್ದೊಡಂ ತಾನು
ಮುನ್ನವ್ಪೋಲಬ್ಬೆಬಳಿಯವರಿರುವರೆನುವಂತೆ ಮೆರೆದ ರಾವಣನು.

೮೯

ಲೋಕಪಾಲರ ಗೆಲ್ದು ನಿಜಶಿರಗಳಿಂ ಶಿವನನರ್ಚಿಸಿಹನೆಂದು
ಹೊಗಳಿದನು ರಾಘವನರಾತಿಯನು ಕೈಲಾಸ ತೂಗಿದವನೆಂದು.

೯೦

ಮೈಥಿಲಿಯ ಸಂಗಮವ ಸೂಚಿಸುವ್ರೊಲದುರುತಿಹ ರಾಮುಬಲ ಭುಜದೆ
ಕ್ರೋಧಾತಿರೇಕದೊಳು ಪೌಲಸ್ತ್ಯನೂರಿದನು ಕೂರಂಬನಿರದೆ.

೯೧

ರಾಘವನುಮೆಳೆದೆಸೆದ ಕೂರಂಬು ಸೀಳುತೊಡನರಿಯ ಹೃದಯವನು
ತಿರೆವೊಕ್ಕುದುರಗಾಳಿಗುಸುರಲೆಂದಾಪ್ರಿಯೋದಂತವನು ತಾನು.

೯೨

ನುಡಿಗೆ ಮರುನುಡಿಗುಡುತೆ ಕಣೆಗೆ ಮರುಕಣೆಬಿಡುತೆ ರಾಮರಾವಣರು
ವಾದಿಗಳ ತೆರನವೋಲೋರೊರ್ವರನು ಗೆಲಲು ಆಶಿಸಿದರವರು.

೯೩

ಇರ್ವರೊಳಮೆಸೆದಿರುವ ವಿಕ್ರಮ ವ್ಯತಿಹಾರದಿಂದೆ ಜಯವನಿತೆ
ಆ ಇರ್ವರೆಡೆಯಿರ್ದಳಿಭಗಳೆರಡರ ನಡುವೆ ವೇದಿಯೆಂತಂತೆ.

೯೪

ಸಮಸತ್ವರೆಸುಗೆ ಮಾರೆಸುಗೆಯೊಳು ಸುರರಸುರರೆಸೆದಲರ್ವಳಿಯ
ಸಹಿಸದಿಹುದಹಹ ರಣರಂಗದೊಳು ಉಭಯರನ್ಯೋನ್ಯಶರನಿಚಯ.

೯೫

ಬಳಿಕಯಃಕಂಟಕೋತ್ಕೀರ್ಣಿತ ಜಯಾರ್ಜಿತ ಶತಘ್ನಿಯಂ ದೈತ್ಯನ್
ಕೂಟಶಾಲ್ಮಲಿವೃಕ್ಷ ಸದೃಶಯಮುದಂಡಮಂ ತೆಗೆದು ರಿಪುಗೆಸೆದನ್.

೯೬

ರಥದೆಡೆಯನೈದದ ಶತಘ್ನಿಯನು ಮೇಣ್ ಗೆಲುವ ದೈತ್ಯನಿಚ್ಛೆಯನು
ಕದಳಿವೋಲರ್ಧಚಂದ್ರಾಸ್ಯಶರದಿಂದರಿದನಹಹ ರಾಘವನು.

೯೭

ಅನುಪಮ ಧನುರ್ಧರನು ಹುಸಿಯಿಲ್ಲವೆನುವ ಬ್ರಹ್ಮಾಸ್ತ್ರವನು ತೆಗೆದು
ಹೆದೆಗಿಟ್ಟನವನಿಜೆಯ ದುಃಖಶಲ್ಯವ ಕಳೆಯುವೌಷಧವನಂದು.

೯೮

ಶತಶತಚ್ಛಿದ್ರವೆನಲಂಬರದೊಳೊಡೆದುರಿದು ತೊಳಗಿರ್ದುದಸ್ತ್ರಂ
ಬಿರ್ಚಿದ ಕರಾಲಫಣಮಂಡಲದ ಅಹಿಶರೀರಂಬೋಲಜಸ್ರಂ.

೯೯

ಏರ್ಪೆತ್ತವೇದನೆಯನರಿಯದೊಲು ರಕ್ಕಸನ ತಲೆಯ ಹಂತಿಯನು
ಅರೆಚಣದೊಳುರುಳಿಸಿದನಭಿಮಂತ್ರಿಸಿದ ಶರಗಳಿಂದೆ ರಾಘವನು.

೧೦೦

ಇಳೆಗೊರಗಲಿಹ ಕಳೇವರದಿಂದಲುದುರುತಿಹ ಪಗೆಯ ತಲೆಹಂತಿ
ಕಂಪಿಸುವ ಜಲದಲೆಯೊಳೆಸೆವೆಳೆಯ ನೇಸರಿನ ಬಿಂಬದವೊಲಾಯ್ತು.

೧೦೧

ಉದುರುತಿರುವಸುರನ ಶಿರಂಗಳನು ನೋಡಿಯುಂ ದೇವತೆಗಳಂದು
ಮುದಗೊಳರು ಮರಳಿ ತಲೆ ಸೇರುವುವೊ ಕೊರಳಿನೊಳು ಎಂದು.

೧೦೨

ಲೋಕಪಾಲನಾನೆಯಾ ಕಪೋಲತಲವನುಳಿಯುತೆ
ಮದದೆ ಭಾರವಾದೆರಂಕೆಗಳನು ಬಿರ್ಚಿ ಸುಳಿಯುತೆ
ಮೊರೆಯುತನುಸರಿಸುತಲಿರುವ ದುಂಬಿವಿಂಡೊಳೆಸೆಯುತೆ
ಕಂಪಿನೊಂದಲಂಪು ಸೂಸುತಿರಲು ಸುತ್ತ ಮುದದೊಳು
ಸುರವಿಮುಕ್ತ ಪುಷ್ಪವರ್ಷವಿಳಿಯಿತಂದು ಭರದೊಳು
ಷಟ್ಪಸನ್ನಿಹಿತವೆನಿಪ್ಪ ರಾವಣಾರಿ ಶಿರದೊಳು.

೧೦೩

ಸುರರ ಕಜ್ಜವ ಮುಗಿಸಿ ಬಿಲ್ಲಿನ
ಹೆದೆಯನಿಳುಹಿದ ರಾಮನಿಂ ಬೀ
ಳ್ಕೊಂಡು ಮಾತಲಿ ಮೇಲಕೊಯ್ದನು ವರವರೂಥವನು
ರಾವಣನ ಹೆಸರಿರುವ ಕಣೆಗಳು
ಕೇತುದಂಡದೊಳೂರಿದಂತಹ
ಒಂದು ಸಾವಿರ ಕುದುರೆ ಹೂಡಿದ ಸುರ ವರೂಥವನು.

೧೦೪

ರಘುಪತಿಯುಮಾಜಾತವೇದನಿಂ ಶುದ್ಧಳಾದಿನಿಯಳೊಡವೆರೆದು
ಪ್ರಿಯಸಖವಿಭೀಷಣನಿಗರಿಯ ಸಿರಿಯೊಡೆತನವ ತೋಷದಿಂದೆರೆದು
ಸುಗ್ರೀವ ಸೌಮಿತ್ರಿ ಮೇಣ್ ವಿಭೀಷಣರ ಜತೆಗೊಂಡಯೋಧ್ಯೆಯನು
ಸಾರಲೆಂದೇರಿದನು ಭುಜವಿಜಿತ ಪುಷ್ಪಕವಿಮಾನರತ್ನವನು.

---

## ಹದಿಮೂರನೆಯ ಸರ್ಗ

# ದಂಡಕಾಪ್ರತ್ಯಾಗಮನ

೧

ಶಬ್ದಗುಣದಾಆತ್ಮಪದವನು ವಿಮಾನದೊಳು
ಆ ಗುಣಜ್ಞನು ಬಳಿಕ ಪೊಗುತಲೈತಂದು
ನೋಡಿ ರತ್ನಾಕರವನೊರೆದನೇಕಾಂತದೊಳು
ರಾಮಾಭಿದಾನಹರಿ ಜಾಯೆಗಿಂತೆಂದು.

೨

ಮಲಯಗಿರಿಯಡಿಯವರೆಗೆನ್ನ ಸೇತುವೆಯೊಡೆದ
ನೊರೆಗರೆಯುವಂಬುಧಿಯ ಜಾನಕಿಯೆ ನೋಡ
ಬಾಂದೊರೆಯಿನೊಡೆದಿರುವ ಚಾರುತಾರೆಗಳಿಡಿದ
ಶಾರದಾಕಾಶದೊಲು ತೋರುತಿದೆ ನೋಡ.

೩

ಯಜ್ಞಕೆಂದೆಳಸಿರ್ದ ಸಗರನ ತುರಂಗವನು
ಕಪಿಲನು ರಸಾತಲಕೆ ಸೆಳೆದೊಯ್ಯಲಂದು
ನಮ್ಮ ಪೂರ್ವಜರಗೆಯಲಶ್ವಕೆಂದುರ್ವಿಯನು
ಕಡಲಾದುದೇಳ್ಗೆವಡೆದೀ ತೆರದೊಳಿಂದು.

೪

ರವಿಕಿರಣವಿದರಿಂದಲಾಂತಪುದು ಗರ್ಭವನು
ವಸುನಿಚಯವಿದರಿನಭಿವೃದ್ಧಿಯೈದುವುದು
ಧರಿಸಿದಪುದೀಶರಧಿ ಸಲಿಲೇಂಧನಾಗ್ನಿಯನು
ಒಗೆದನಿದರಿಂದಲೆಯೆ ಮುದವೀಯುವಿಂದು.

೫

ಬಗೆಬಗೆಯ ಪಲತೆರದವಸ್ಥೆಯನು ತಳೆದಿರುವ
ಮಹಿಮೆಯಲಿ ದಶದಿಶೆಯನಾವರಿಸುತಿರುವ
ಇದರಿರವು ವಿಷ್ಣುವೊಲು ಪರಿಮಾಣವಿನಿತೆಂದು
ಈ ತೆರದೊಳಿಹುದೆಂದು ಪೇಳಲರಿದಹುದು.

೬

ನಾಭಿಯಿಂದೊಗೆದ ಕಮಲಾಸನದೊಳಿರುವವನು
ಹೊಗಳುತಿರೆ ಮೊದಲನೆಯ ಆ ಪಿತಾಮಹನು
ಕಲ್ಪಾಂತಪರಿಚಿತದ ಯೋಗನಿದ್ರೆಯೊಳಿಹನು
ಲೋಕಗಳನೊಳಗೆಳೆದು ಹರಿ ಪವಡಿಸಿಹನು.

೭

ರೆಕ್ಕೆ ತರಿದಿಂದ್ರನಿಂದದ್ರಿಗಳು ನೂರಾರು
ಮದವಳಿದು ಮೊರೆಪೊಕ್ಕವೀಶರಣ್ಯನನು
ಶತ್ರುವಿನುಪಪ್ಲವದೊಳಂಜಿದವನೀಶ್ವರರು
ಧರ್ಮಪ್ರಧಾನಮಧ್ಯಮರನೆಂತಂತು.

೮

ಆದಿಭವಪುರುಷನು ರಸಾತಲದಿನುರ್ವಿಯನು
ಉದ್ವಹನಗೈದ ಅರಗಳಿಗೆಯೊಳಗಂದು
ಅಂಬುಧಿಯ ವಿಲಯಪ್ರವೃದ್ಧಾಚ್ಛಜಲ ತಾನು
ಬೆಳಗಿದುದು ವಕ್ತ್ರಾವಗುಂಠದೊಲು ಸಂದು.

೯

ತಾಂ ತರಂಗಾಧರಾರ್ಪಣದಕ್ಷನಾದವನು
ಸಾಗರನು ಅಸಮಾನ್ಯ ಸಂಭೋಗಸುಖನು
ವಕ್ತ್ರಾರ್ಪಣಾಪ್ರಕೃತಿ ಧೃಷ್ಟವಾಹಿನಿಗಳನು
ಚುಂಬಿಸಿದನವುಗಳುಂ ತನ್ನ ಚುಂಬಿಪೊಲು.

೧೦

ಜಲಚರಗಳೊಡವೆರೆದ ಈ ನದೀಮುಖಪಯವ
ತಿಮಿಗಳಿದೊ ತೆರೆದ ಬಾಯ್ಗಳಿನೀಂಟುತಿಹವು
ಮತ್ತೆ ಬಾಯನು ಮುಚ್ಚಿ ತಲೆಯ ತೂಂತುಗಳಿಂದೆ
ನೀರ್ಗೊನಲನೆರಚಿದಪುವೆತ್ತರಕೆ ಭರದೆ.

೧೧

ನೋಡು ಗಜನಕ್ರಂಗಳೆದ್ದು ಬಿದ್ದಂಬುಧಿಯ-
ನೆರಡಾಗೆ ಸೀಳಿದಂದೊಗೆದ ಬಿಳಿನೊರೆಯು
ಅರೆಘಳಿಗೆ ನೊರೆಯೋಳಿ ಕೆನ್ನೆ ಬಳಿಯೊಳೆ ಹರಿಯ-
ಲೆಸೆದಪುದು ಚಾಮರದವೋಲಾನೆ ಕಿವಿಯ.

೧೨

ವೇಲೆಬಳಿ ಎಲರುಣ್ಣಲೆದ್ದು ಬಂದಹಿಗಳನು
ವೇಲೆಬಳಿಯಪ್ಪಳಿಸುತುರುಳುವಲೆಗಳನು
ರವಿಕಿರಣಸಂಗದಿಂದುಜ್ವಲಿಸಿ ಪೊಗರೆಸೆಯೆ
ಬೇರ್ಪಡಿಸಿ ತೋರುವುದು ತತ್ಫಣೋನ್ಮಣಿಯೆ.

೧೩

ನಿನ್ನ ತುಟಿಯನು ಸೆಣಸುತಿರುವ ಚೆಂಬವಳದೊಳು
ಪೇರಲೆಯ ವೇಗದಿಂದುರುಳುತ್ತೈತಂದು
ಅದರ ಮೇಲ್ಮೊಗದ ಕುಡಿ ಕಚ್ಚುವುವು ಶಂಖಗಳು
ಕಳಚುವುವು ಕಷ್ಟದಿಂದೆಂತೊ ಪಿಂದೆಗೆದು.

೧೪

ನೀರನೀಂಟುವೆನೆಂದು ಕುಡಿಯತೊಡಗಿರ್ದಂದೆ
ಸುಳಿಯ ವೇಗಕೆ ಸಿಲುಕಿ ಸುತ್ತುತಿರೆ ಮುಗಿಲು
ಮಂಥನಕೆ ಸಿಲುಕಿತೆನೆ ಮರಳಿ ಮಂದರದಿಂದೆ
ಹೊಳೆಯುತಿಹುದತಿಶಯದೊಳಿದೊ ನೋಡು ಕಡಲು.

೧೫

ಉಪ್ಪುಕಡಲಿನ ದಡವು ಕಬ್ಬಿಣದ ಗಾಲಿವೋಲು
ದೂರವಾದುದರಿಂದೆ ತೆಳ್ಪನಿರದೆಸೆದು
ಹೊಂಗೆ ತಾಳೆಯ ಬನದ ನೀಲಿಬಣ್ಣದೊಳಿಂದು
ಗಾಲಿಗಂಟಿದ ಕೊಳೆಯ ಗೆರೆಯವೋಲಿಹುದು.

೧೬

ಸಿಂಗರಿಪನೀನಿನ್ನ ಮೊಗವನು ತಟಾನಿಲನು
ಕೇದಗೆಯ ಹುಡಿಯಿಂದೆ ಹೇ ಆಯತಾಕ್ಷಿ
ಮಂಡನವಿಳಂಬವನು ಸಹಿಸಲಾನಕ್ಷಮನು
ಎನ್ನುವೋಲೆಸಗುವನು ನೋಡೆಂಥ ಸಾಕ್ಷಿ.

೧೭

ಮರಳಿನೊಳು ಚಿಪ್ಪೊಡೆದು ಚೆಲ್ಲಿರುವ ಮುತ್ತುಗಳು
ಗೊನೆಯ ಭಾರಕೆ ಬಳುಕುವಡಕೆತೋಟಗಳು
ಓ ನಾವು ಬೇಗನ್ನೈತಂದೆವು ವಿಮಾನದೊಳು
ಕಡಲ ಕರೆ ಸಿಕ್ಕಿತು ಮುಹೂರ್ತಮಾತ್ರದೊಳು.

೧೮

ಜಿಂಕೆಗಣ್ಣಿನ ಹೆಣ್ಣೆ ನೋಡು ನೋಟವ ಬೀರು
ದಾಂಟಬಂದೆಡೆಯೊಳೊಂದಿನಿಸು ಕರಭೋರು
ಕಾನನಸಮೇತಮಾದವನಿಯಿದು ತೋರುವುದು
ಹಿಂದುಳಿದ ಕಡಲಿನಿಂದುಣ್ಮುವೋಲಿಂದು.

೧೯

ನೋಡಿದೊ ವಿಮಾನವಿಂದೋಡುವುದು ಹಾರುವುದು
ನನ್ನ ಮನದಭಿಲಾಷೆಯೆಂತಂತೆ ಸಂದು
ಸುರಪಥದೊಳೋರೊರ್ಮೆ ಘನಪಥದೊಳೋರೊರ್ಮೆ
ಖಗಪಥದೊಳೋರೊರ್ಮೆ ಸಂಚರಿಸುತಿಹುದು.

೨೦

ತ್ರಿಪಥಗೆಯ ತೆರೆತೆರೆಯ ಸೀರ್ಪನಿಯ ತಣ್ಪಾಂತು
ಸುರಗಜದ ಮದಜಲದ ನರುಗಂಪನಾಂತು
ಸುಳಿವ ಬಾನಿನ ಗಾಳಿ ನಡುವಗಲೊಳೊಗೆದಿರುವ
ನಿನ್ನ ಮೊಗದೀಬೆಮರನಳಿಸಲೈತರುವ.

೨೧

ಕಿಟಕಿಯಲಿ ತೂರಿರುವ ಕೈಗಳಿಂದೆಲೆ ಚಂಡಿ
ಕೌತುಕಕೆ ಮೋಡವನು ನೀಂ ಮುಟ್ಟಿದಂದು
ದುಂಡನೆಯ ಪೊರಪೊಣ್ಮಿದೆಳೆಮಿಂಚಿನಿಂದಲಿದು
ತೋರುವುದು ತೊಡಿಸಿದೋಲೆರಡನೆಯ ಬಳೆಯ.

೨೨

ಈ ಜನಸ್ಥಾನವನು ಬಹುಹಿಂದೆ ಬಿಟ್ಟವರು
ಎಡರಳಿದುದೆಂದರಿದು ವರಚೀರಭೃತರು
ತಂತಮ್ಮ ಆಶ್ರಮವಿಭಾಗದೊಳು ಕಟ್ಟುವರು
ಪೊಚ್ಚಪೊಸತೆಲೆವನೆಯ ಮೇಣ್ ನೆಲಸಿದಪರು.

೨೩

ನಿನ್ನ ತಾವರೆಯಡಿಯ ಅಗಲಿಕೆಯ ದುಗುಡದೊಳು
ಕೆಮ್ಮನಿಹುದೆನಲಿಳೆಯೊಳುರುಳಿದಂದುಗೆಯ
ನಿನ್ನನರಸುತಬಂದು ಎಲ್ಲಿ ಕಂಡೆನೊ ನಾನು
ಆದುವೆ ತಾಣವದಿತ್ತ ತೋರುತಿದೆ ನೋಡು.

೨೪

ರಾಕ್ಷಸನದೇಮಾರ್ಗದಿಂದೊಯ್ದನೆನುವುದನು
ಎಲೆ ಭೀರು ಮಾತಿನಿಂದರುಹಲರಿಯದವು
ದಯಗೈದು ಪೇಳಿದವು ಈ ಲತೆಗಳೆನಗಂದು
ಚಿಗುರುಗಳ ಭಾರದಿಂದೊಂದೆಡೆಗೆ ತೊನೆದು.

೨೫

ಎಳೆಯ ಕುಶಸೂಚಿಯನು ನಲಿದು ಮೇವುದನುಳಿದು
ನಿನ್ನ ಗತಿಯರಿಯದೆನಗೆರಳೆಗಳುಮುಂದು
ತಿಳಿಪುವೋಲರುಹಿದವು ಮೇಲೆತ್ತಿ ಕಣ್ಣೆವೆಯ
ತಿರುಗಿಸುತೆ ದಿಟ್ಟಿಯನು ತೆಂಕಣುತ್ತರಿಯ.

೨೬

ಎಲ್ಲಿ ನಾ ಸುರಿಸಿದೆನೊ ಆಗಲಿಕೆಯ ಕಂಬನಿಯ
ಮೇಣೆಲ್ಲಿ ಸುರುವಿದುದೊ ಮುಗಿಲು ಹೊಸಮಳೆಯ
ಆ ಮಾಲ್ಯವದ್ ಗಿರಿಯ ಎತ್ತರದ ಶಿಖರವಿದು
ನೋಡಿತ್ತ ನಮ್ಮೆದುರೊಳೊಗೆದೇಳುತಿಹುದು.

೨೭

ಮಳೆಯ ಹೊಯ್ಲೊಳು ಸಿಲುಕಿದೆಳೆದಳಿರ ನರುಗಂಪು
ಅರೆಬಿರಿದ ಕೇಸರದ ಕಾದಂಬದಿಂಪು
ಕುಣಿವ ನವಿಲಿನ ಕೇಕೆಯೊಂದಲಂಪಿನ ಪೆಂಪು
ಹೊಲಸಾದುವಳಲಿಸಿರಲಗಲಿಕೆಯ ಕಾಯ್ಪು.

೨೮

ಎಲೆ ಭೀರು ಹಿಂದೆ ನಾನನುಭವಿಸಿದಾ ಒಂದು
ನಿನ್ನ ಅದಿರಪ್ಪುಗೆಯ ನೆನೆಯುತಿರಲಂದು
ಗವಿಮನೆಯನೂ ಹೊಕ್ಕು ಅನುರಣನಗೊಳುತಿರ್ದ
ಮೋಡಗಳ ಮೊಳಗುಗಳನೆಂತು ಸಹಿಸಿದೆನೊ.

೨೯

ಮಳೆಯಿಂದೆ ನಾಂದಿಳೆಯ ಹಬೆಯಿಂದೆ ಕಂದಳಿಯ
ಮೊಗ್ಗೆ ಬಿರಿದರಳತಿರುವರುಣಸುಮನಿಚಯ
ಮದುವೆ ಹೊಗೆಯಿಂದೊಗೆದ ನಿನ್ನಕ್ಷಿಯರುಣತೆಯ-
ನನುಕರಿಸಿ ಪೀಡಿಸಿತ್ತಂದೆನ್ನ ಬಗೆಯ.

೩೦

ಬಳಿಯ ಬೆತ್ತದ ಬನದ ಜವನಿಕೆಯ ಮರೆಯಿಂದೆ
ನಸುತೋರಿ ಸುಳಿಯುವೀ ಸಾರಸವ್ರಜದೆ
ಮೆರೆವ ಪಂಪಾಂಬುವನು ಕುಡಿವಪ್ಪೋಲೆರಗಿದುದು
ದೂರದಿಂದೈತಂದ ದಿಟ್ಟಯಿದು ದಣಿದು.

೩೧

ನೈದಿಲೆಯ ಕೇಸರವನೊಂದಕೊಂದುಣಿಸೀಯು-
ತಗಲಿಕೆಯನಿನಿಸರಿಯದೆಣೆವಕ್ಕಿ ಜತೆಯ
ಆಗಲಿ ನಿನ್ನನು ನಾನು ಬಹುದೂರವಿದ್ದಂದು
ನೋಡಿದೆನು ಆಸೆಯಿಂದಿನಿಯೆ ಈಯೆಡೆಯೆ.

೩೨

ಚೆಂಗುಡಿಯ ಕಮನೀಯ ಬಿಣ್ಮೊಲೆಯ ಭಾರದೊಳು
ಬಳುಕುವೀ ದಡದೆಡೆಯ ಎಳೆಯಸುಗೆ ಲತೆಯ
ನೀನೆ ಬಂದಿಹೆಯೆಂದು ತಬ್ಬಲೆಳಸಿದೆನಂದು
ತಡೆದನೀ ಲಕ್ಷ್ಮಣನು ಕಣ್ಣೀರು ಸುರಿದು.

೩೩

ಈ ವಿಮಾನಾಂತರದೊಳಿಲ್ಲಿ ತೊನೆಯುತಲಿರುವ
ಕನಕಮಯ ಕಿಂಕಿಣಿಯ ಝೇಂಕೃತಿಯ ಕೇಳ್ದು
ಗೋದಾವರೀನದಿಯ ಸಾರಸದ ಪಂಕ್ತಿಚಯ
ಎದುರುಗೊಳಲೆನುವಂತೆ ಬಾನ್ನೇರುತಿಹುದು.

೩೪

ಅಸಿಯಳಾದರು ನೀನು ಕೊಡನೀರನೊಲಿದೆರೆದು
ಬೆಳಸಿರುವ ಈ ಮಾವಿನೆಳೆಸಸಿಗಳಿಂದೆ
ಮತ್ತೆ ಮೊಗವೆತ್ತಿರುವ ಏಣವೃಂದಗಳಿಂದೆ
ಪಂಚವಟಿ ಬಹುದಿನಕೆ ಮುದವೀಯುತಿಹುದು.

೩೫

ಇಲ್ಲಿ ಗೋದೆಯ ಬಳಿಯೆ ಬೇಂಟೆಯಿಂದೈತಂದು
ಸುಳಿಯುವಲೆಗಾಳಿಯೊಳು ಸೇದೆಯನು ಕಳೆದು
ನಿನ್ನ ತೊಡೆಯೊಳು ನಾನು ತಲೆಯಿಟ್ಟು ಮಲಗಿದೆನು
ಬೆತ್ತದೊಳಮನೆಯೊಳದನಿಂದು ನೆನೆದಪೆನು.

೩೭

ಹುಬ್ಬು ಬಿಗಿವಷ್ಟರಿಂದಾವ ಮುನಿ ನಹುಷನನು
ಅಮರೇಂದ್ರಪದವಿಯಿಂದಂದುರುಳಿಸಿದನು
ಕಾನಾದನಾವ ಮುನಿ ಜಲಶುದ್ಧಿಕಾರಣನು
ಆ ಅಗಸ್ತ್ಯನ ನೆಲದ ನೆಲೆವನೆಯಿದಹುದು.

೩೭

ಈ ವಿಮಾನಾಧ್ವವನು ತ್ರೇತಾಗ್ನಿಧೂಮವಿದು
ಆಕ್ರಮಿಸುತ್ತೈತಹುದು ದೆಸೆದೆಸೆಯ ಕವಿದು
ಅಮಲಕೀರ್ತಿಯ ಹವಿಯ ಕಂಪಿನಿಂದುಸಿರೆಳೆದು
ಲಘುವಾದುದೆನ್ನಾತ್ಮವಿದೊ ರಜವನುಳಿದು.

೩೮

ಸುತ್ತಲುಪವನವಿರುವ ಪಂಚಾಪ್ಸರಸ್ಸೆನುವ
ನೀರಾಟದೀಕೊಳವು ಶಾತಕರ್ಣಿಯದು
ತೋರ್ಪುದಿದು ಮಾನಿನಿಯೆ ದೂರವಿರ್ಪುದರಿಂದೆ
ಮುಗಿಲ ಮರೆಯಿಂದಿಣುಕುವಿಂದುವಿನ ತೆರದೆ.

೩೯

ಬರಿಯ ದರ್ಭೆಯ ತಿಂದು ಜಿಂಕೆಗಳ ಜೊತೆ ಸುಳಿದು
ತಪಗೈಯುವೀಶಾತಕರ್ಣಿಯನು ನೆನೆದು
ಐವರಚ್ಚರಸಿಯರ ಕೂಟವನು ಹೂಡಿದನು
ಮಘವಾನನೀಮುನಿಯ ತಪಕಂಜಿದವನು.

೪೦

ಆ ಮುನಿಯ ನೀರೊಳಗಿನರಮನೆಯ ಕಮನೀಯ
ಗಾಯನದ ಮದ್ದಲೆಯ ಮೊಳಗಿನೊಂದುಲಿಯು
ಅಂಬರವನಾಕ್ರಮಿಸುತನುರಣನಗೊಳ್ಳುತಿದೆ
ಪುಷ್ಪಕ ಶಿರೋಗೃಹದೊಳಾಲಿಸಿದೊ ಭರದೆ.

೪೧

ನಾಲ್ದಿಸೆಯ ಕಟ್ಟಿಗೆಯ ಬಿಂಕಿಯುರಿಮಧ್ಯದೊಳು
ಏಳು ಕುದುರೆಯ ನೇಸರುರಿಸುತಿರೆ ಹಣೆಯ
ಹೆಸರೊಳು ಸುತೀಕ್ಷ್ಣನಾಚಾರದೊಳು ಮಿತನಿವನು
ಪೆರತೊರ್ವ ಋಷಿವರನು ತಪವೆಸಗುತಿಹನು.

೪೨

ಸೊಂಟದೊಡ್ಯಾಣವನು ನೆವದೆ ನಸುತೋರಿಸುತೆ
ಕುಡಿನೋಟಗಳನೆಸೆದು ಮುಗುಳು ನಗೆ ನಗುತೆ
ಬಿಂಕಗೊಂಡಮರಿಯರ ಬೆಡಗಿನಿಂದವಿಚಲನು
ತಾನಾದನಿಂದ್ರಂಗೆ ಶಂಕೆಯಿತ್ತಿವನು.

೪೩

ಜಿಂಕೆಗಳ ಮೈನವೆಯ ತುರಿಸಿ ಕಳೆಯುತಲಿರುವ
ಎಳೆಯ ಕುಶಸೂಚಿಗಳನಾಯ್ದುಕೊಳುತಿರುವ
ಅಕ್ಷಮಾಲೆಯ ಬಳೆಯು ತಳೆದು ಮೆರೆಯುತಲಿರುವ
ಬಲಗೈಯನೆಮಗೆತ್ತಿ ಗೌರವಿಸುತಿಹನು.

೪೪

ಮುನಿ ಮೌನಿಯಾದುದರಿನಿಂದೆನ್ನ ನಮನವನು
ತಲೆಯ ನಸುಕಂಪನದಿನೊಪ್ಪಿಕೊಳುತಿಹನು
ಪುಷ್ಪಕದ ಮರೆ ತೊಲಗಲಿದೊ ಮರಳಿ ದಿಟ್ಟಿಯನು
ಆ ಸಹಸ್ರಾರ್ಚಿಯೊಳು ನೆಟ್ಟಿರುವನಿವನು.

೪೫

ಆಹಿತಾಗ್ನಿಯನಾಂತ ಶರಭಂಗನಾಶ್ರಮವು
ಪಾವನ ತಪೋವನವು ಶರಣರಾಶ್ರಯವು
ಬಹುಕಾಲ ತಣಿಯಿಸುತೆ ಸಮಿಧೆಯಿಂದಗ್ನಿಯನು
ಬೇಳಿದನು ಮನುಪೂತ ನಿಜತನುವನವನು.

೪೬

ಶರಭಂಗನೆಸಗುತಿರ್ದತಿಥಿಪೂಜೆಯನಿಂದು
ಹಾದಿನಡೆದಲಸಿಕೆಯ ನೆರಳಿತ್ತು ಕಳೆದು
ತನಿವಣ್ಗಳನ್ನಿತ್ತು ಒಡಲ ಹಸಿವನು ನೀಗಿ
ಮಕ್ಕಳೋಲೀಮರಗಳುಪಚರಿಸುತಿಹವು.

೪೭

ಹೊನಲ ದನಿಯನು ಹರಹುತಿಹುದು ಕಣಿವೆಯ ಬಾಯಿ
ಕೋಡ ತುದಿಗಂಟಿಹುದು ಮೋಡಗಳ ಕೆಸರು
ಕೊಬ್ಬಿರುವ ಗೂಳಿವೊಲು ಚಿತ್ರಕೂಟಾದ್ರಿಯಿದು
ಹೇ ಚೆನ್ನೆ ನನ್ನ ಕಣ್ಗಳ ಸೆಳೆಯುತಿಹುದು.

೪೮

ಮೆಲ್ಲಮೆಲ್ಲನೆ ಹರಿದು ಮಂದಾಕಿನೀ ನದಿಯು
ದೂರವಿರುವುದರಿಂದೆ ತನುತೆಯನು ಮೆರೆದು
ಚಿತ್ರಕೂಟದ ಬಳಿಯೊಳಿಳೆಯ ಮುಕ್ತಾವಳಿಯು,
ತಾನೆನುವವೋಲಿಹುದು ನೋಡು ಹೊಳೆಯೆಸೆದು.

೪೯

ಬೆಟ್ಟದೆಡೆಯೊಳು ಹೊಂಗೆ ಸೊಂಪಾಗಿ ಬೆಳೆದಿಹುದು
ನರುಗಂಪಿನಿದರೊಂದು ಚಿಗುರುಗೊನೆ ತಂದು
ಯವದ ಮೊಳೆಯಂದದೊಳು ನಸುಬೆಳ್ಪನಾಂತಿರುವ
ಕಿವಿದೊಡವನೆಸಗಿದೆನು ಕೆನ್ನೆಯೊಳು ಹೊಳೆವ.

೫೦

ಅಂಕೆಯಂಜಿಕೆಯಿರದೆ ಪಳಗಿರುವ ಮೃಗಗಳಿವೆ
ಹೂಬಿಡದೆ ಫಲಬರುವ ಗಿಡಮರಗಳಿಹವು
ಮುನಿಯ ವರಮಹಿಮೆಗಳನಿವುಗಳಿಂತುಸುರುತಿವೆ
ಇದುವೆ ಆ ಅತ್ರಿಯ ತಪಃಸಿದ್ಧಿವನವು.

೫೧

ಸಪ್ತರ್ಷಿಬೃಂದ ಬಂದಾಯ್ದ ಹೊಂದಾವರೆಯ
ಶಿವನ ಮುಡಿಮಾಲೆಯಾದಾದೇವನದಿಯ
ಮುನಿಗಳಭಿಷೇಕಕೆಂದನಸೂಯೆ ತಾನಂದು
ಹರಿಯುವಂತೆಸಗಿದಳು ಈ ಎಡೆಯೊಳೊಲಿದು.

೫೨

ವೃಕ್ಷತಲದೀವೇದಿಮಧ್ಯದೊಳು ಧ್ಯಾನಿಪರು
ವೀರಾಸನಸ್ಥಘನತಾಪಸೋತ್ತಮರು
ಅನಿಲನಿಲ್ಲದ ಕತದೆ ಹರೆಯನಿನಿಸಲುಗಿಸದೆ
ತರುವಿಹವು ಯೋಗಾಧಿರೂಢರಾದರೊಲು.

೫೩

ಆವ ಹಿರಿಯಾಲವನು ಹೊಗಳಿದೆಯೊ ನೀನಂದು
ಆ ಶ್ಯಾಮವಿದು ನೋಡು ಜಸವಡೆದುದೆಸೆದು
ಪದ್ಮರಾಗಂಬೆರೆದ ಮರಕತಾಳಿಯ ಪೋಲ್ತು
ತೋರುತಿದೆ ರಮಣೀಯಮೆನೆ ಮರಂ ಪಣ್ತು.

೫೪

ಒಂದುಕಡೆ ಹೊಳೆಹೊಳೆಯುವಿಂದ್ರನೀಲಂಗಳನು
ಕೋದ ಮುತ್ತಿನ ಮಣಿಯ ಹಾರವೆನುವಂತೆ
ಒಂದುಕಡೆ ನೈದಿಲೆಯ ಹೂಗಳೊಡನೆಡೆಯೆಡೆಯೆ
ಹೆಣೆದ ಬೆಳ್ದಾವರೆಯ ಹಾರವೆನುವಂತೆ;

೫೫

ಒಂದುಕಡೆ ನೀಲವರ್ಣಮರಾಳದೋಳಿಯೊಳು
ಬೆರೆದಿರುವ ರಾಜಹಂಸಾಳಿಯೆನುವಂತೆ
ಒಂದುಕಡೆ ಕರಿಯಗುರಿನಿಂದೆಸೆವ ಚಿತ್ರದೊಳು
ಚಂದನದ ಭುವಿಯಲಂಕಾರ ಬೆರೆದಂತೆ;

೫೬

ಒಂದುಕಡೆ ನೆರಳಿನೊಳಗದ್ದಿರುವ ಕತ್ತಲೊಳು
ಅಲ್ಲಲ್ಲಿ ಬಿದ್ದಿರುವ ಬೆಳುದಿಂಗಳಂತೆ
ಒಂದುಕಡೆ ಅಲ್ಲಲ್ಲಿ ನೀಲಿನಭರಂಧ್ರದೊಳು
ಹೊಳೆವಮಲ ಶರದಭ್ರಲೇಖೆಯೆನುವಂತೆ ;

೫೭

ಭಸ್ಮಾಂಗರಾಗವನು ಅಸಿತಾಹಿಭೂಷಣನು
ತೊಡೆದಂದು ಹರನ ತನು ತಾನೆಸೆಯುವಂತೆ
ಯಮುನಾತರಂಗಸಂಕಲಿತಮಾದೀಗಂಗೆ
ಹಲತೆರದೊಳೆಸೆಯುತಿದೆ ನೋಡು ವಿಮಲಾಂಗಿ.

೫೮

ಇಲ್ಲಿ ಕಡಲರಸಿಯರ ಸಂಗಮುದೆ ಮೀವಂದು
ಪೂತಾತ್ಮರಾದವರು ತಾಂ ಮೈಯನುಳಿಯೆ
ತತ್ತ್ವಾವಬೋಧವಿರದಿದ್ದರೂ ಸಂದವರು
ದೇಹಸಂಬಂಧದೊಳು ಮರಳಿ ತಾಂ ಬರರು.

೫೯

ಮುಡಿಯ ಮಣಿಯನು ತೊರೆದು ಜಡೆಗಳನು ಹೆಣೆದಂದು
ಕೈಕೇಯಿ ನಿನ್ನಿಷ್ಟ ಸಫಲಮಾಯ್ತೆಂದು
ಆ ಸುಮಂತ್ರನು ಅಂದು ಅತ್ತುದಿಲ್ಲಿಯೆ ನೋಡು
ಇದುವೆ ಆ ಬೇಡರೊಡೆಯನ ಗುಹನ ಬೀಡು.

೬೦

ಬುದ್ಧಿಗವ್ಯಕ್ತತರವೆನುವ ವೇದಂಗಳೊಲು
ವೇದವಿದರೊರೆಯುವರು ಸರಯುವನು ಕುರಿತು
ಯಕ್ಷಿಯರ ಕುಚಭುಕ್ತಹೇಮಾಬ್ಜರಜವೆರೆದು
ಮೆರೆವ ಮಾನಸದಿಂದಲೊಗೆದಪುದಿದೆಂದು.

೬೧

ಇಕ್ಷ್ವಾಕುನೃಪರಶ್ವಮೇಧಾವಭೃತದಿಂದೆ
ಪುಣ್ಯತರಮೆನಲೆಸಗಿದುದಕವನು ತಳೆದು
ತಾನಯೋಧ್ಯಾರಾಜಧಾನಿಯ ಸಮೀಪದೊಳು
ಹರಿಯುವುದು ದಡದೆಡೆಯ ಯೂಪಗಳಿನೆಸೆದು.

೬೨

ಪುಳಿನಾಂಕದೊಳು ನಲಿದು ಪಯವನೀಂಟುತೆ ಬೆಳೆದು
ಉತ್ತರದ ಕೋಸಲದ ನೃಪರೆಲ್ಲರಂದು
ಸೊಗವಡೆದರೆನಲವರ ಸಾಮಾನ್ಯಧಾತ್ರಿಯೊಲು
ಮೆರೆಯುವೀಸರಯುವನು ಬಗೆ ಮಣಿಯುತಿಹುದು.

೬೩

ನನ್ನ ತಾಯಿಯೊಲಿಂದು ದೊರೆಯನಗಲಿದ ಸರಯು
ದೂರದೊಳು ನೆಲಸಿರ್ದು ಹಿಂದಿರುಗಲಿಂತು
ತಂಬೆಲರ ತೀಟದಲಿ ತೆರೆಗೈಗಳಾಟದಲಿ
ಅಪ್ಪಿಕೊಳುವೋಲಿಹುದು ನನ್ನನು ಸಮಂತು.

೬೪

ಕೆಂಪು ಬೈಗಿನವೋಲು ಕಪಿಶವರ್ಣವನಾಂತು
ಬುವಿಯ ದೂಳೇಳ್ವುದರಿನೂಹಿಸುವೆನಿಂತು
ಹನುಮನಿಂದರಿತವನು ಸೇನೆಯಿಂದೊಡವೆರೆದು
ನನ್ನನುಜನೆದುರುಗೊಳಲೈತರುವನೆಂದು.

೬೫

ಯುದ್ಧದೊಳು ಕೊಂದುಬಂದಂದು ಖರಮುಖ್ಯರನು
ಲಕ್ಷ್ಮಣನು ನಿನ್ನನೆನಗಿವನಿತ್ತನೆಂತು
ಪೂಣ್ಕೆಯನು ಪಾಲಿಸಿರುವೆನಗೀವನೊಳ್ಪಿದನು
ಅನಘೆಯನು ಲಕ್ಷ್ಮಿಯನು ರಕ್ಷಿತೆಯನಂತು.

೬೬

ಹಿಂದೆ ನಿಜಸೇನೆಯನು ಮುಂದೆ ಗುರುದೇವನನು
ಜೊತೆಯೊಳು ಅಮಾತ್ಯರನು ವೃದ್ಧರಾದರನು
ನೆಲೆಗೊಳಿಸುತವರಜನು ನಾರುಡೆಯನುಟ್ಟವನು
ಅರ್ಘ್ಯದಿಂದಿದಿರುಗೊಳೆ ನಡೆದುಬರುತಿಹನು.

೬೭

ನನ್ನೊಂದು ಭಕ್ತಿಯೊಳು ಯುವಕನಾದರು ತಾನು
ತಂದೆಯಿತ್ತಂಕಗತರಾಜ್ಯಲಕ್ಷ್ಮಿಯನು
ಅನುಭವಿಸದಸಿಧಾರೆಯೊಂದು ಕಡುನೋಂಪಿಯನು
ಇಷ್ಟೊಂದು ವರ್ಷಗಳು ಕಲಿತವೋಲಿಹನು.

೬೮

ದಾಶರಥಿ ಸೀತೆಗೊಲಿದಿಂತುಸುರುತಿರುವಂದು
ತನ್ನ ಅಧಿದೇವತೆಯನವನಿಚ್ಛೆಯರಿದು
ಭರತನನು ಅನುಸರಸಿಬಂದವರು ವಿಸ್ಮಯದೆ
ನೋಡುತಿರಲಿಳೆಗಿಳಿದುದಾಕಾಶದಿಂದೆ.

೬೯

ನೆಲಕೆ ಹತ್ತಿರವಿರುವ ಪಟಿಕಗಳ ಮೆಟ್ಟಲನು
ತೋರಿದನು ಮುಂದೆ ನಡೆದಾ ವಿಭೀಷಣನು
ಕೈಹಿಡಿದು ಯಾನದಿಂದಿಳಿಸಿದನು ರಾಮನನು
ಸೇವಾವಿಚಕ್ಷಣನು ವಾನರೇಶ್ವರನು.

೭೦

ಪರಿಶುದ್ಧನಿಕ್ಷ್ವಾಕುಕುಲಗುರುವಿಗೆರಗಿದನು
ಅರ್ಘ್ಯವನು ಕೊಂಡಬಳಿಕಾ ಅಶ್ರುಮುಖನು
ಭಕ್ತಿಯೊಳು ಅಯ್ಯನಧಿರಾಜ್ಯದಭಿಷೇಕವನು
ತೊರೆದವನನಪ್ಪಿದನು ಮೂಸಿ ನೆತ್ತಿಯನು.

೭೧

ಶ್ಮಶ್ರುವೃದ್ಧಿಯೊಳಂದು ವದನವಿಕೃತಿಯನಾಂತು
ಬಿಳಿಲು ಜಡೆಗಳ ತಳೆದು ಆಲದೊಲು ಮೆರೆದು
ಮಣಿವ ಮುದಿಸಚಿವರನು ಕೃಪೆಯ ದೃಷ್ಟಿಯನೆರೆದು
ಕುಶಲವನು ಕೇಳಿದನು ರಾಮನು ಸಮಂತು.

೭೨

ಬವರದೊಳು ಮುನ್ನುಗ್ಗುವೀತನು ವಿಭೀಷಣನು
ನನ್ನ ಆಪದಬಂಧು ಕಪಿಮುಖ್ಯನಿವನು
ರಾಮನಾದರದಿಂದಮಾತಾಡಿದಿರ್ವರನು
ಸೌಮಿತ್ರಿಗೂ ಮೊದಲು ಭರತನೆರಗಿದನು.

೭೩

ಬಳಿಕ ತಲೆಬಾಗಿಸಿದ ಭರತನನು ಲಕ್ಷ್ಮಣನು
ಮೇಲೆತ್ತಿ ಬರಸೆಳೆದು ಎದೆನೋಯುವಂತೆ
ಇಂದ್ರಜಿತು ಹೊಡೆವೆಸಗಿದೇರಿನೊಳು ಕಠಿಣತೆಯ–
ನಾಂತೆದೆಯಿನಪ್ಪಿದನು ಒಲುಮೆಯಿಂ ಬಿಗಿದು.

೭೪

ರಾಮನಾಣತಿಯಿಂದಲಾ ವಾನರೇಶ್ವರರು
ಆನೆಗಳನೇರಿದರು ನರರೂಪ ತಳೆದು
ಮದವಾರಿಧಾರೆಯನು ಸುರಿಸುವಿಭಗಳಲವರು
ಶೈಲಾಧಿರೋಹಣದ ಸೌಖ್ಯವನು ಪಡೆದು.

೭೫

ದಾಶರಥಿಯಾಜ್ಞಾನುಬದ್ಧನಸುರೇಶ್ವರನು
ತೇರನಂದೇರಿದನು ಆ ಸಾನುಚರನು
ಮಾಯಾವಿಕಲ್ಪರಚಿತಂಗಳೆನಿಸಿದರೇನು
ದನುಜರಥ ದಾಶರಥಿರಥಕೆಣೆಯೆ ತಾನು.

೭೬

ಶೋಭಿಪ ಪತಾಕೆಯಾಕಾಮಚರಯಾನವನು
ಸಾವರಜನೇರಿದನು ಮರಳಿ ರಘುವರನು
ಬುಧಗುರುಗಳೊಡವೆರೆದ ಕಮನೀಯ ಹಿಮಕರನು
ಇರುಳೊಗೆವ ಮಿಂಚುವಭ್ರವನೇರುವಂತೆ.

೭೭

ಮೋಡದಿಂದಾಶರದನೆತ್ತಿದಿಂದುವಿನಂತೆ
ಜಗದೊಡೆಯ ಲಯದಿಂದಲೆತ್ತಿದಿಳೆಯಂತೆ
ರಘುರಾಮನಸುರನಿಂದೆತ್ತಿದಿಳೆಯಣುಗಿಯನು
ನಮಿಸಿದನು ಭರತನಾವೋದವಾಂತಳನು.

೭೮

ಲಂಕೆಯೊಡೆಯನ ನತಿಯ ಮುರಿಪ್ಪೊಂದು ನೋಹಿಯನು
ನಿಟ್ಟೆಯಿಂದೆಸಗಿದಿಳೆಯಣುಗಿಯಡಿಜೊತೆಯ
ಹಿರಿಯಣ್ಣನೊಲು ನಡೆದು ಜಡೆಯ ಕಟ್ಟಿದ ತಲೆಯ
ಕೂಡಲದೊಳಾಂತವನ್ಯೋನ್ಯವಿಮಲತೆಯ.

೭೯

ಮುಂದೆ ಪುರಜನರೊಲಿದು ನಡೆದಿರೆ
ಹಿಂದೆ ಪುಷ್ಪಕಮೆಲ್ಲಮೆಲ್ಲನೆ
ಸಾರುತ್ತೈತರೆ ಅರ್ಧಕ್ರೋಶವ ಕಳೆದು ಬಂದಾರಾಮನು
ಅಲ್ಲಿ ವರಶತ್ರುಘ್ನಸಜ್ಜಿತು—
ದಾರಪಟಮಯದಾಲಯಂಗಳಿ—
ನೆಸೆವ ಸಾಕೇತೋಪವನದೊಳು ಬೀಡುಬಿಟ್ಟನು ಪೂಜ್ಯನು.

---

## ಹದಿನಾಲ್ಕನೆಯ ಸರ್ಗ

## ಸೀತಾಪರಿತ್ಯಾಗ

೧

ಆಸರೆಯ ಮರಮುರಿದ ಬಳ್ಳಿ ಜೊತೆಯಂದದೊಳು
ಪೆರತಳಲಿನವತೆವಡೆದಿನಿಯನಳಿವಿನೊಳು
ನವೆಯುತಿರುವಬ್ಬೆಯರ ದಶರಥನ ವರಸುತರು
ಏಕಕಾಲದೊಳಲ್ಲಿ ಕಂಡರಂದವರು.

೨

ಆರ್ಪಿನಿಂದೆಸೆವವರು ಹಗೆಗಳನು ಕೊಂದವರು
ಪರಿವಿಡಿಯೊಳಬ್ಬೆಯರಿಗಿಬ್ಬರೆರಗಿದರು
ಕಂಬನಿಯ ಮಬ್ಬಿನೊಳು ನೋಡದೊಡಮಂತಂದು
ಮೈಯ ಸೋಂಕಿನ ಸೊಗದೊಳರಿತರವರಹುದು.

೩

ಗಂಗೆ ಮೇಣ್ ಸರಯುಗಳ ಬೇಸಗೆಯ ಬಿಸಿದೊರೆಯ–
ನಾರಿಪೊಲು ಹಿಮಗಿರಿಯ ತಣ್ಣನೆಯ ಹೊನಲು
ಉಮ್ಮಳದ ಕಂಬನಿಯ ಬಿಸುಪನಂದಿಳಿಸಿದುದು
ನಲವಿನಿಂದೊಗೆತಂದ ತಣ್ಬಪನಿಯಿಳಿದು.

೪

ಮಕ್ಕಳುಗಳಂಗದೊಳು ರಕ್ಕಸರ ಕೈದುಗಳು
ಪಡೆದೇರುಗಳನಂದು ಹೊಸತೆಂಬವೋಲು
ದಯವೆರೆದು ತಡಹುತ್ತ ಕ್ಷತ್ರವನಿತೇಷ್ಟವನು
ವೀರಸೂ ಶಬ್ದವನು ತಾಮೆಳಸದಿಹರು.

೫

ಸ್ನಾನಲಕ್ಷಣೆ ಸೀತೆ ಭರ್ತೃಕ್ಲೇಶಾವಹಳು
ಇಂತು ತನ್ನನು ತಾನೆ ಕರೆದುಕೊಳುತವಳು
ಆ ದಿವಂಗತ ಗುರುವಿನರಸಿಯರಿಗೆರಗಿದಳು
ಭಕ್ತಿ ಭೇದವನು ಸೊಸೆ ತೋರದಂದದೊಳು.

೬

ಓ ಮಗಳೆ ಮೇಲೇಳು ನಿನ್ನವಳ ವೃತ್ತದೊಳು
ಸಾನುಜನು ದುರ್ಭರಕ್ಲೇಶಗಳನಂತು
ನಿನ್ನಿನಿಯ ಕಳೆದನೆಂದೊಳ್ನುಡಿಯ ನನ್ನಿಯನು
ಪ್ರೀತ್ಯಾರ್ಹಳಾದವಳಿಗೊರೆದರು ಸಮಂತು.

೭

ಜನನಿಯರ ಆನಂದಜಲದಿಂದ ಮೊದಲಾದ
ರಘುವಂಶಕೇತುವಿನ ಅಭಿಷೇಕವದನು
ವೃದ್ಧಮಂತ್ರಿಗಳಂದು ಹೊಂಗೊಡಗಳಲಿ ತಂದ
ತೀರ್ಥಾಂಬುವನ್ನೆರೆದು ಮುಗಿಸಿದರು ನಲಿದು.

೮

ಹೊಳೆ ಕಡಲು ಕೊಳಗಳಿಂದುದಕವನು ಮೊಗೆಮೊಗೆದು
ಮಂಗರಕ್ಕಸರೊಡೆಯರೆಲ್ಲರುಂ ತಂದು
ಜಿಷ್ಣುವಿನ ನೆತ್ತಿಯೊಳು ಸುರುವಿದರು ಮೋಡಗಳು
ವಿಂಧ್ಯಗಿರಿ ಮೂರ್ಧ್ನಿಯೊಳು ಮಳೆಗರೆವಪೋಲು.

೯

ಮುನಿವೇಷದಿಂದೆಯುಂ ಪ್ರೇಕ್ಷಣೀಯನು ತಾನು
ಆವಾತನಾರಾಮಚಂದ್ರನು ಸಮಂತು
ರಾಜೇಂದ್ರನೇಪಥ್ಯವಿಧಿಯಿಂದೆ ಭಾಜನನು
ಪುನರುಕ್ತದೋಷಕೆಂದಾದನಂದಂತು.

೧೦

ತೂರ್ಯರವದಿಂದಲುಕ್ಕೇರುತಿರೆ ಪುರಜನರು
ವರಮಂತ್ರಿದನುಜಕಪಿನಿಜಬಲಾನ್ವಿತನು
ತೋರಣಂಗಟ್ಟಿರುವ ನಿಜರಾಜಧಾನಿಯನು
ಅರಳುಮಳೆ ಸುರಿಯುತಿರಲೊಳಪೊಕ್ಕನವನು.

೧೧

ಶತ್ರುಘ್ನ ಲಕ್ಷ್ಮಣರು ಲಲಿತ ಚಾಮರವಿಡಿದು
ಮೃದುವಾಗಿ ಬೀಸುತಿರಲೆಡಬಲದೊಳಂದು
ಭರತ ತೇರೊಳು ನಿಂದು ಬೆಳ್ಗೊಡೆಯ ಪಿಡಿದಂದು
ನಾಲ್ಕುಪಾಯಂಗಳವೊಲಿರ್ದರವರೆಸೆದು.

೧೨

ಪ್ರಾಸಾದದಗ್ರದಿಂದಗುರು ಧೂಮದ ರೇಖೆ
ವಾಯುವಶದೊಳು ಮುರಿದು ಸಲೆಮೆರೆದುದಂದು
ವನದಿಂದಲೈತಂದು ಆ ರಘೂತ್ತಮನೊಲಿದು
ಬಿರ್ಚಿದ ಪುರಾಂಗನೆಯ ಜಡೆಯೆಂಬ ತೆರದೆ.

೧೩

ಶ್ವಶ್ರೂಜನಾನುಷ್ಠಿತ ಚಾರುವೇಷೆಯನು
ಕರ್ಣೀರಥಸ್ಥೆಯನು ರಾಮಪತ್ನಿಯನು
ಪ್ರಾಸಾದವಾತಾಯನಲಕ್ಷ್ಯಪುಟವೆರೆದು
ಸಾಕೇತನಾರಿಯರು ನಮಿಸಿದರು ಮಣಿದು.

೧೪

ಕಾಂತಿಮಂಡಲದಿಂದಲನಿಶಮೆಸೆದೊಪ್ಪುತಿರು-
ವನಸೂಯೆಯಿತ್ತಂಗರಾಗವನು ತಳೆದು
ಶುದ್ಧಳೆಂದಿನಿಯ ನಿಜಪುರಿಗರುಹುವಂದದೊಳು
ಮರಳಿಯುರಿವೊಕ್ಕವೋಲವಳೆಸೆದಳಂದು.

೧೫

ಭೋಗ ಪರಿಕರಯುಕ್ತಸದ್ಮಗಳಲಿರಿಸಿದನು
ಸುಹೃದರನು ಸೌಹಾರ್ದನಿಧಿರಘೂದ್ವಹನು
ಆಲೇಖಶೇಷನಾದಶರಥನ ಬಲಿಮನ್ನಿ-
ಕೇತನವನೈದಿದನು ಬಾಷ್ಪಲೋಚನನು.

೧೬

ಪರಿಕಿಪೊಡೆ ನಮ್ಮ ಗುರು ನಾಕಫಲಮಪ್ಪೊಂದು
ಸತ್ಯವನು ಎಲೆ ತಾಯೆ ಬಿಡದಿರ್ದುದಿಂದು
ತವಸುಕೃತವೆಂದೊರೆದು ಅಂಜಲಿಯ ಕೈಮುಗಿದು
ಭರತಜನನಿಯ ಲಜ್ಜೆಯನು ಕಳೆದನಂದು.

೧೭

ಸಂಕಲ್ಪಮಾತ್ರದಿಂದೊಗೆದೊಂದು ಸಿದ್ಧಿಯೊಳು
ಸುಗ್ರೀವನು ವಿಭೀಷಣನು ಮತ್ತಿನವರು
ವಿಸ್ಮಯಕ್ರಾಂತರೆನಲುಪಚಾರವೆಸಗಿದನು
ಕೃತಕವಸ್ತುಗಳಿಂದಲಾನೃಪೋತ್ತಮನು.

೧೮

ಅಭಿವಂದನಾಯೋಪಗತದಿವ್ಯಮುನಿಗಳನು
ಸತ್ಕರಿಸುತುಸುರಿದನು ರಘುಕುಲೋದ್ವಹನು
ತಾಂ ಕೊಂದ ಶತ್ರುವಿನ ಜನನಾದಿವೃತ್ತವನು
ನಿಜಶೌರ್ಯಗೌರವಾಸ್ಪದಮನವನದನು.

೧೯

ತೆರಳಲು ತಪೋಧನರು ರಕ್ಷಃಕಪೀಶ್ವರರು
ಸುಖಪರತೆಯಿಂದಲವರರಿಯದೋಲಂದು
ಮಾಸಾರ್ಧವನು ಕಳೆಯಲವನಿಜೆಯ ಕೈಯಿಂದ—
ಲುಡುಗೊರೆಯ ಕೊಡಿಸುತ್ತ ಕಳುಹಿದನು ನೃಪನು.

೨೦

ಆತ್ಮಚಿಂತಾಸುಲಭವೆನಿಸಿದ ವಿಮಾನವನು
ಅಸುರನಸುಸಹಿತಮುಂದೀಳ್ದುಕೊಂಡುದನು
ಕೈಲಾಸನಾಥನುದ್ವಹನಕೆಂದಟ್ಟಿದನು
ಆಕಾಶ ಪುಷ್ಪವನು ಪುಷ್ಪಕವನವನು.

೨೧

ಜನಕನ ನಿಯೋಗದಿಂದಾರಣ್ಯವಾಸವನು
ಕಳೆದು ರಾಜ್ಯವ ಪಡೆದು ರಘುರಾಮನಂದು
ಧರ್ಮಾರ್ಥಕಾಮುಗಳಲೆಂತಂತು ಅನುಜರೊಳು
ಸಮವೃತ್ತಿಯಿಂದಿರ್ದನೌದಾರ್ಯವೆರೆದು.

೨೨

ನಿರ್ಭೇದಭಾವದೊಳು ಜನನಿಯರನೆಲ್ಲರನು
ಸತ್ಕಾರವೆಸಗಿದನು ವಾತ್ಸಲ್ಯಮಯನು
ತನ್ನಾರು ಬಾಯ್ಗಳಿಂದೆದೆವಾಲನೆಳೆದವನು
ಕೃತ್ತಿಕಾಜನನಿಯರನೊಲಿದವೊಲು ಗುಹನು.

೨೩

ತನ್ನ ಔದಾರ್ಯದೊಳು ಧನಿಕರಾದರು ಜನರು
ವಿಘ್ನಭಯವಳಿಯೆ ಕರ್ಮದೊಳು ತೊಡಗಿದರು
ತನ್ನೊಂದು ಶಿಕ್ಷಣದೆ ಪಿತೃಮಂತರಾಗಿಹರು
ತಾನಳಲ ಕಳೆದಂದು ಸುತವಂತರವರು.

೨೪

ಪೌರಜನಕಾರ್ಯವನು ನಡೆಯಿಸುತ್ತೆ ಕಾಲದೊಳು
ಭೋಗಾಭಿಲಾಷೆಯೊಳು ಚಾರುವಪು ತಳೆದು
ಲಕ್ಷ್ಮಿಯವತರಿಸಿದವೊಲಿರುವ ಆ ಸೀತೆಯೊಳು
ಸುಖಿಸಿದನು ಶ್ರೀರಾಮನಾಮೋದವಡೆದು.

೨೫

ಇಂದ್ರಿಯಾರ್ಥಂಗಳನು ಮನವೆಳಸಿದಂದದೊಳು
ಚಿತ್ರಸದನಂಗಳಲಿ ಭೋಗಿಸುತಲಿರಲು
ದಂಡಕದೊಳೊದಗಿರ್ದ ದುಃಖಮಂ ನೆನೆದಂದು
ಸುಖವೆನಿಸಿತವನಿಜಾರಾಘವರಿಗಂದು.

೨೬

ಸಂಸ್ನಿಗ್ಧನೇತ್ರದೊಳು ಶರಶುಭ್ರವದನದೊಳು
ಗರ್ಭಸಲ್ಲಕ್ಷಣವನಂದವನಿಜಾತೆ
ಬಾಯ್ಬಿಟ್ಟು ಪೇಳದೊಡಮೆಲ್ಲವನು ಸೂಚಿಸುತೆ
ಆನಂದಗೊಳಿಸಿದಳು ರಾಮನನು ಸೀತೆ.

೨೭

ವರ್ಣಾಂತರಾಕ್ರಾಂತಪೀನಸ್ತನಾಗ್ರಿಯನು
ಚಾರುತರ ಕಾರ್ಶ್ಯಯನು ವರಲಜ್ಜಿತೆಯನು
ರಹದೊಳಂದಂಕಗತೆ ಸೀತೆಯನು ರಾಘವನು
ಬಯಕೆಯೇನೊರೆಯೆಂದು ನುಡಿಯಿಸಿದನವನು.

೨೮

ದುಷ್ಟಸತ್ತ್ವಗಳಗಿದ ನೀವಾರ ಬಲಿಯಿರುವ
ಋಷಿಸುತೆಯರಳ್ಕರಿಂದೊಡವೆರೆಯುತಿರುವ
ಕುಶವನ್ತಿ ಭಾಗೀರಥೀತೀರದೊಳು ಮೆರೆವ
—ಬಯಸಿದಳು ಮುನಿವನಕೆ ಹೋಹ ದೋಹದವ.—

೨೯

ಸೀತೆಯೊಂದೀಪ್ಸಿತವನಾಗುಮಾಡುವೆನೆಂದು
ರಘುವೀರನನುಚರರನೊಡವೆರೆದು ನಡೆದು
ಮುದವಾಂತಯೋಧ್ಯೆಯನು ನೋಳ್ಪ ಕತದಿಂದಂದು
ನಭಕಣೆವ ಸೌಧಾಗ್ರಕೇರಿದನು ನಲಿದು.

೩೦

ಋದ್ಧಾಪಣಂಗಳಿಂದೆಸೆವ ನೃಪಮಾರ್ಗವನು
ನೌಲುಲಿತ ಸರಯುವನು ನೋಡಿದನು ನೃಪನು
ನಗರೋಪಕಂಠದುಪವನದೊಳು ವಿರಾಜಿಸುವ
ಪುರಜನವಿಲಾಸಿಗಳನೀಕ್ಷಿಸಿದನವನು.

೩೧

ಆತ್ಮವೃತ್ತಾಂತವನು ಕುರಿತ ಜನವಾರ್ತೆಯನು
ಪೇಳೆಂದು ಶುಚಿವೃತ್ತನಾವಾಗ್ಮಿವರನು
ವಿಜಿತಾರಿಭದ್ರನಾಭದ್ರನಪಸರ್ಪನನು
ಕೇಳಿದನು ಸರ್ಪಾಧಿರಾಜೋರುಭುಜನು.

೩೨

ಬಲವಂತಗೊಳಿಸಲಂದಾತನಿಂತುಸುರಿದನು
ನಿನ್ನೆಲ್ಲ ಚರಿತೆಯನು ಪೊಗಳುವರು ಜನರು
ರಾಕ್ಷಸನ ಭವನದೊಳು ನೆಲಸಿರ್ದ ದೇವಿಯನು
ಕರೆತಂದ ಕಾರ್ಯವನದೊಂದನುಳಿದವರು.

೩೩

ನಿಜಭಾರ್ಯೆಯಪವಾದವೆನುವ ದುರ್ಭರದೊಂದು
ಕೀರ್ತಿಯ ವಿಪರ್ಯಯಾಘಾತದೊಳು ನೊಂದು
ಸೀಳ್ದವೊಲಯೋಘಾತಕಭಿತಪ್ತಲೋಹವುದು
ವೈದೇಹಿಬಂಧುವಿನ ಎದೆಯೊಡೆದುದಂದು.

೩೪

ಆತ್ಮನಿರ್ವಾದವೃತ್ತಾಂತವನುಪೇಕ್ಷಿಸಲೆ
ನಿರ್ದೋಷಿ ಜಾಯೆಯನು ನಾಂ ತ್ಯಜಿಸಿ ಬಿಡಲೆ
ಏಕಪಕ್ಷಾಶ್ರಯದೊಳಿಂತು ವಿಕ್ಲವಯುತನು
ಡೋಲಾಯಮಾನಮನನಾದನಾನೃಪನು.

೩೫

ಪಳಿಯಳಿಯದನ್ಯವೃತ್ತಿಯಿನೆಂದು ತರಿಸಂದು
ತೊಡೆಯಲದನೆಳಸಿದನು ಪತ್ನಿಯನು ತೊರೆದು
ನಿಜತನುವಿನಿಂ ಪಿರಿದು ಕೀರ್ತಿಯೆಂದೆಣಿಸುವನು
ಕೀರ್ತಿಧನನೆನಲಿತರ ಸುಖದಿಂದಲೇನು ?

೩೬

ನಿಸ್ತೇಜನನುಜರನು ಬರವೇಳ್ದು ನಿಜವಿಕೃತಿ
ದರ್ಶನದೊಳಾನಂದ ವರತಪಗೊಳೆಂದು
ರಾಘವನು ನಿಜವಿಷಯಕೌಲೀನಮಂ ನುಡಿದು
ಮರಳಿ ತಾನೊರೆದನಿರದವರಗೊಳಿಂತೆಂದು.

೦೭

ರವಿಯೊಗೆದ ಬಳಿಯೊಳೀ ರಾಜರ್ಷಿವಂಶದೊಳು
ಒಳ್ಪಡೆಯಿನತಿಶುದ್ಧಮೆನಿಪನ್ವಯದೊಳು
ನೋಡೆಂಥ ಕುಂದೊಗೆದುದೆನ್ನೊಂದು ಕತದಿಂದೆ
ಮುಕುರ ಕೊಳೆಯಾಗುವ್ರೊಲು ಮಳೆಗಾಳಿಯಿಂದೆ.

೩೮

ನೀರಿನ ತರಂಗದೊಳು ತೈಲಬಿಂದುವದೆಂತು
ಪೌರರೊಳು ಹಬ್ಬುತಿರಲಪವಾದವಂತು
ತತ್ಪೂರ್ವನಿಂದೆಯನು ಸಹಿಸದಿಹೆನಿಂದಾನು
ಸಹಿಸದೊಲು ನಾಗೇಂದ್ರನಾಲಾನವದನು.

೩೯

ತೊಡೆಯಲಪವಾದವನು ಜನಕಜೆಯನುಳಿಯುವೆನು
ಆಸನ್ನಸಂತಾನಫಲಸಿರಂಜನನು
ನಾನಂದು ಪೂರ್ವದೊಳು ಪಿತನೊಂದನುಜ್ಞೆಯೊಳು
ಉದಧಿನೇಮಿಯ ಧರೆಯನುಳಿದಂತೆವೋಲು.

೪೦

ಅನಘೆಯೆಂದಾಕೆಯನು ತಿಳಿದಿರುವೆನಿಂದಾನು
ಪಿರಿದೆಂಬೆನಾದೊಡಂ ಜನರ ಪಳಿಯಿದನು
ಅಮಳಶಶಿಬಿಂಬದೊಳು ನೆಲದ ನೆಳಲನು ಕಂಡು
ಕರೆಯೆನ್ನರೇ ಜನರು ಭ್ರಾಂತಿಗೊಂಡು.

೪೧

ಅಸುರಹನನದೊಳೆನ್ನ ಯತ್ನ ಕೊನೆಗೊಂಡುದದು
ವ್ಯರ್ಥಮಲ್ತದರಿಂದ ಪಗೆ ಮುಡಿದನಂದು
ದ್ವಿರಸನನು ಕೋಪದೊಳು ತನ್ನ ತುಳಿದಾತನನು
ಶೋಣಿತಾಕಾಂಕ್ಷೆಯೊಳು ತಾಂ ಕಡಿಯನೇನು ?

೪೨

ಪಳಿಯೆನುವ ಶಲ್ಯವನು ಕಿಳ್ತಾನು ಚಿರಮೆಸೆದು
ಪ್ರಾಣದಿಂದಿರುವುದನು ನೀಮೆಳಸಿದಂದು
ಕರುಣಾರ್ದ್ರಚಿತ್ತದಿಂದೆನ್ನ ನಿಶ್ಚಯಕಿಂದು
ಪ್ರತಿಷೇಧಮಂ ನುಡಿದು ಕಿಡಿಸುವುದು ತಗದು.

೪೩

ಜನಕರಾಜಾತ್ಮಜೆಯ ವಿಷಯದೊಳು ತಾನಂತು
ರೂಕ್ಷಾಗ್ರಹಂದಳೆದ ಪತಿಯೊಳು ಸಮಂತು
ಒರೆಯುವಂದನುಮತಿಯನಿಲ್ಲವೆ ನಿಷೇಧವನು
ತಮ್ಮದಿರೊಳೊರ್ವನುಂ ಶಕ್ತನೆಂತಹನು.

೪೪

ಸತ್ಯವನು ನುಡಿವವನು ಲಕ್ಷ್ಮಣನ ಪೂರ್ವಜನು
ರಾಘವನು ಲೋಕತ್ರಯೀಗೀತಯಶನು
ಆಜ್ಞಾನುವರ್ತಿಯನು ಲಕ್ಷ್ಮಣನನೀಕ್ಷಿಸುತೆ
ಬೆಸಸಿದನು ಎಕ್ಕಟಿಯೊಳೆಲೆ ಸೌಮ್ಯ ಎನುತೆ.

೪೫

ಮುನಿವನದೊಳಿರುವುದನು ನಿನ್ನ ಅತ್ತಿಗೆಯವಳು
ತನ್ನೊಂದು ಬಯಕೆಯೆಂದೆನ್ನೊಳೊರೆದಿಹಳು
ತೇರನೇರಿಸಿಕೊಳುತಲಾನೆಪದೊಳಾಕೆಯನು
ವಾಲ್ಮೀಕಿ ಪದದೆಡೆಯೊಳುಳಿದು ಬಾ ನೀನು.

೪೬

ಗುರುವಿನಾಣತಿಯಿಂದಲಂದು ಆ ಭಾರ್ಗವನು
ಶತ್ರುವ್ರೊಲು ತಾಯಿಯನು ತಾಂ ಕೊಂದುದದನು
ಕೇಳ್ದವನು ಅಗ್ರಜನ ಶಾಸನವನೊಪ್ಪಿದನು
ಗುರ್ವಾಜ್ಞೆ ಯವಿಚಾರಣೀಯಮಹುದಲ್ತೆ !

೪೭

ಆ ಸುಮಂತ್ರನು ಹಿಡಿದ ಕಡಿವಾಣದಿಂದಿರುವ
ಬೆದರದಿರುವಶ್ವಗಳ ಕಟ್ಟಿ ತಂದಿರುವ
ತೇರಿನೊಳು ಲಕ್ಷ್ಮಣನು ಜನಕರಾಜಾತ್ಮಜೆಯ
ಕರೆದೊಯ್ದನಿಷ್ಟವಾರ್ತಾಶ್ರವಣಸುಖಿಯ.

೪೮

ರುಚಿರ ಪ್ರದೇಶಗಳಿಗೊಯ್ಯುತಿರಲಾಕೆಯನು
ನಲವಾಂತಳಿನಿಯನು ಮುದಂಕರನು ಎಂದು
ಕಲ್ಪದ್ರುಮತ್ವವನು ತೊರೆದಂತರಂಗದೊಳು
ಅಸಿಪತ್ರವೃಕ್ಷವಾದುದನರಿಯದಿಹಳು.

೪೯

ದಾರಿಯೊಳು ಲಕ್ಷ್ಮಣನು ದುಃಖಮನನಾವುದನು
ಮಾಜಲೆಂದಿರ್ದನವನಿಜೆಯಿನಂದು
ಲುಪ್ತಪತಿದರ್ಶನದ ದಕ್ಷಿಣಾಕ್ಷಿಸ್ಫುರಣ—
ಮಾಭಾವಿ ಶೋಕವನು ತಾನೊರೆದುದದನು.

೫೦

ದುರ್ನಿಮಿತ್ತೋಪಗತದುಃಖದಿಂದೊಡನುರಿದು
ಆ ಪರಿಮ್ಲಾನನಾಂಬುಜವದನೆ ನೊಂದು
ಕೋರಿದಳಬಾಹ್ಯಕರಣಂಗಳಿಂದವಳಂದು
ಶಿವಮಸ್ತು ಸಾನುಜಮಹಾರಾಜಗೆಂದು.

೫೧

ಗುರು ಬೆಸಸಿದಂದದೊಳು ಹದಿಬದೆಯನಬಲೆಯನು
ಕಾಡಿನೊಳು ತೊರೆಯಲಿಹ ಲಕ್ಷ್ಮಣನನು
ತೆರೆಗೈಗಳನ್ನೆತ್ತಿ ಬೇಡೆಂದು ತಡೆವಪ್ರೊಲು
ಮುಂದೆಸೆಯೊಳೆಸೆದಳಂದಾಜಹ್ನುತನಯೆ.

೫೨

ವಾಹಕನು ಕುದುರೆಗಳನಿಲಿಸಿದಂದತ್ತಿಗೆಯ
ತೇರಿನಿಂದಿಳಿಸಿದನು ಮರಳಿನೊಂದೆಡೆಯೆ
ಶಬರ ತಂದೋಡಿನೊಳು ದಾಂಟಿದನು ಗಂಗೆಯನು
ದಾಂಟುವೊಲು ಮೇರೆಯನು ಆ ಸತ್ಯರತನು.

೫೩

ಕಷ್ಟದಿಂದೆಂತೆಂತೊ ನುಡಿಗಳನು ಪವಣಿಸುತೆ
ಬಳಿಕ ಕಂಠಸ್ತಂಭಿತಾಶ್ರು ಸೌಮಿತ್ರಿ
ಉತ್ಪಾತ ಮೇಘ ತಾನಶ್ಮವನು ಕರೆವಂತೆ
ಧರಣೀಶನಾಜ್ಞೆಯನು ಪೇಳ್ದನಂದತ್ತೆ.

೫೪

ಅಭಿಷಂಗ ಜಂಝಾನಲಾಭಿಹತೆ ಆ ಸೀತೆ
ಜಗುಳುತಿರಲಾಭರಣ ಕುಸುಮಂಗಳಂದು
ನಿಜಮೂರ್ತಿಯುದ್ಭವದ ನೆಲೆಯಹ ವಸುಂಧರೆಯ
ಮೇಲೊಡನೆ ಉರುಳಿದಳು ಪೋಲ್ವವೊಲು ಲತೆಯ.

೫೫

ಆರ್ಯವೃತ್ತನು ಭರ್ತನಿಕ್ಷ್ವಾಕುಸಂಭವನು
ನಿನ್ನನೆಂತುಳಿದಪನಕಾರಣದೊಳೆಂಮು
ತಾಯಿ ತಿರೆ ಶಂಕಿಸುತಲೀತೆರದೊಳಾಕೆಯನು
ಪುಗಿಸಿಕೊಳಲೆಡೆಗೊಡದವೋಲಿರ್ದಳಂದು.

೫೬

ದುಃಖವನು ತಾನರಿಯಳಹ ನಷ್ಟಚೇತನಳು
ಎಚ್ಚತ್ತಬಳಿಕೊಳಗೆ ಸಂತಪಿಸುತಿಹಳು
ಲಕ್ಷ್ಮಣನ ಯತ್ನದೊಳು ಲಬ್ಧಮಾದೆಚ್ಚರವು
ಮೋಹದಿಂದತಿಕಷ್ಟಮೆನಿಸಿರ್ದುದಂದು.

೫೭

ದೋಷಮಿನಿತಿಲ್ಲದೊಡಮುಳಿದನೆಂದಿನಿಯನನು
ಆರ್ಯೆಸೀತಾದೇವಿ ನಿಂದಿಸಿದಳಿಲ್ಲ
ತಾಂ ಚಿರಕ್ಲೇಶಕರ ದುರಿತಭಾಜನೆಯೆಂದು
ತನ್ನನೇ ಸಲಸಲಕೆ ಜರೆದುಕೊಳುತಿಹಳು.

೫೮

ಬಳಿಕ ರಾಮಾನುಜನು ಸತಿಯ ಸಂತವಿಸಿದನು
ತೋರಿದನು ವಾಲ್ಮೀಕಿಯಾಶ್ರಮಾಧ್ವವನು
ಸ್ವಾಮ್ಯನುಜ್ಞೆಯ ಕತದೊಳಾದ ಪೌರುಷ್ಯವನು
ಕ್ಷಮಿಸುವುದು ನಿಸ್ನನೆಂದೆರಗಿದನು ತಾನು

೫೯

ಸೀತೆಯಾತನನೆತ್ತಿ ಪೇಳ್ದಳೀವಾಕ್ಯವನು
ಪ್ರೀತಳಾದೆನು ಸೌಮ್ಯ ಚಿರಕಾಲ ಬದುಕು
ಹರಿಯಧೀನನು ತಾನು ಆ ಬಿಡೌಜನದೆಂತು
ನೀನಗ್ರಜಾತಂಗಧೀನನಹೆಯಂತು.

೬೦

ಮಣಿದಿಂತು ಪರಿವಿಡಿಯೊಳತ್ತೆವಿರನೆಲ್ಲರನು
ಪೇಳ್ದಳಿಂಪೊರೆಯೆನ್ನ ಬಿನ್ನಪವನಿದನು
ಮನದೊಳಾಶೀರ್ವದಿಸಿ ನಿಮ್ಮ ಮಗನಿಂದೊಗೆದು
ಬೆಳೆದ ನನ್ನೀ ಬಸುರಿಗೊಳಿತಕ್ಕೆ ಎಂದು.

೬೧

ತನ್ನೆದುರೊಳಗ್ನಿಪರಿಶುದ್ಧಳೆನಿಸಿರ್ದಳನು
ಲೋಕವಾದಶ್ರವಣಕತದೊಳಿಂದಿಂತು
ತೊರೆದಪುದು ತತ್‌ಸದೃಶಕುಲಕೆ ತಕ್ಕುದದೆಂತು
ಎಂದೆನ್ನ ಮಾತಿನೊಳು ರಾಜನನು ಕೇಳು.

೬೨

ಅಲ್ಲದೊಡೆ ಕಲ್ಯಾಣಬುದ್ಧಿಯಿಂದೆನ್ನನಿಯು
ಬೇಕೆಂದು ಮಾಡಿದುದು ಎನಲಾಗದಿದನು
ನನ್ನ ಜನ್ಮಾಂತರದ ಪಾಪದುರ್ಧರಕರ್ಮ—
ದಶನಿ ನಿರ್ಘೋಷವಿರದೆರಗಿರುವುದಿಂತು.

೬೩

ಪ್ರಾಪ್ತಲಕ್ಷ್ಮಿಯ ತೊರೆದು ನೀನೆನ್ನನೊಡವೆರೆದು
ಮುನ್ನ ವನಕೈತಂದೆಯೆಂದವಳು ಮುಳಿದು
ನಿನ್ನ ಭವನದೊಳಿಂದು ಮರಳಿ ನಾನಿರುವಂದು
ಸಹಿಸದಾದಳು ಲಕ್ಷ್ಮಿ ನನ್ನಿರವನೆಂದು.

೬೪

ದನುಜರಲೆಯೊಳು ನೊಂದ ಋಷಿಪತ್ನಿಯರಿಗಂದು
ನಿನ್ನನುಗ್ರಹಬಲದೊಳಾಶ್ರಯವನೆರೆದು
ಅನ್ಯರಾಶ್ರಯವನಿಂದಾನೆರೆವುದೆಂತೆಂದು
ತೋರದಿಹುದಲ್ಲಿ ನೀಂ ತೊಳಗುತಿರುವಂದು

೬೫

ನಿನ್ನ ಕಟ್ಟಗಲಿಕೆಯೊಳಿಂತು ನಿಷ್ಫಲವೆನುವ
ಹತಜೀವವಿದನಿಂದು ಕಡೆಗಣಿಸಲಹುದು
ಕಾಪಾಡವೇಳ್ಕುಮೆನುವೀನಿನ್ನ ತೇಜವಿದು
ಪೊಡೆಯೊಳಿರುತಳಿಯುವೆನಗೆಡರಾಗದಂದು.

೬೬

ಪ್ರಸವೋತ್ತರಾವಧಿಯೊಳಾನು ತಪವೆಸಗುವೆನು
ಸೂರ್ಯನೊಳು ದೃಷ್ಟಿಯನು ನಿಷ್ಠೆಯಿಂದಿಟ್ಟು
ನೀನೆ ಜನನಾಂತರದೊಳಾದೊಡಂ ಪತಿಯಾಗ—
ಬೇಕೆಂದು ವಿರಹ ಮೇಣೊದಗದಿರಲೆಂದು.

೬೭

ವರ್ಣಾಶ್ರಮಂಗಳನು ತಾನೊಲಿದು ಪಾಲಿಪುದು
ನೃಪಧರ್ಮವೆಂದು ಮನುಮುನಿಯೊರೆದನಹುದು
ತ್ಯಕ್ತೆ ನಾನಾದೊಡಂ ಮುನಿಕುಲಮನೆಂತಂತೆ
ನೀಂ ನೋಳ್ಪುದದಕೆಂದು ನಾನರ್ಹಳಲ್ತೆ !

೬೮

ಇಂತಾಕೆಯುಸುರುತಿರಲಂತಾಗಲೆಂದೊರೆದು
ಲಕ್ಷ್ಮಣನು ಕಣ್ಬೊಲದಿನತ್ತ ನಡೆದಂದು
ಬಾಯ್ದೆರೆದು ರೋದಿಸಿದಳತಿದುಃಖಭಾರದೊಳು
ಬೆದರಿರುವ ಕುರರಿಪ್ರೋಲವಳು ಹಲುಬಿದಳು.

೬೯

ನವಿಲುಗಳು ನೃತ್ಯವನು ವೃಕ್ಷಗಳು ಸುಮಗಳನು
ಮೆಲುಕಿಡುವ ಹರಿಣಗಳು ಕುಶಕಬಳಗಳನು
ತಾಮುಳಿದು ತೋರಿದವು ಸಮದುಃಖಭಾವದೊಳು
ಕಾಡೊಳುಂ ಶೋಕವನು ಆ ಮೈಥಿಲಿಯೊಳು.

೭೦

ವ್ಯಾಧವಿದ್ಧಾಂಡಜದ ದರ್ಶನದೊಳೊಗೆದೊಂದು
ಶೋಕ ತಾಂ ಶ್ಲೋಕಮಾಯ್ತಾರಿಂದಲಂದು
ಆ ಕವಿ ಕುಶೇಧ್ಮಂಗಳನು ತರಲು ಬಂದವನು
ಅನುಸರಿಸುತೈದಿದನು ಆಕ್ರಂದನವನು.

೭೧

ಕವಿವ ಕಂಬನಿಯೊರಸಿ ನಿಲಿಸಿ ಗೋದಿಸುವುದನು
 ನಮಿಸಿದಳು ಸೀತೆ ಆ ವಾಲ್ಮೀಕಿ ಮುನಿಯ
ಬಸುರಿಯೆನುವುದನರಿತು ಸತ್ಪುತ್ರವತಿಯಾಗು
 ಎಂದು ಆಶೀರ್ವದಿಸಿ ಮತ್ತೆಂದನಿಂತು.

೭೨

ಪ್ರಣಿಧಾನದಿಂದರಿತೆನನೃತಾಪವಾದದೊಳು
 ಕ್ಷೋಭೆಗೊಂಡೆರೆಯನಿಂದುಳಿದವಳು ಎಂದು
ಅನ್ಯದೇಶದೊಳಿರುವ ತಂದೆಮನೆಗೈತಂದೆ
 ವ್ಯಥೆಯನಿನ್ನುಳಿವುದೌ ವೈದೇಹಿ ಇಂದು.

೭೩

ಮೂರು ಲೋಕದ ಮುಳ್ಳನೆಳೆದು ಕಿತ್ತಿರಲೇನು
 ಹೊಗಳಿಕೊಳದಿರಲೇನು ನಿಜ ನುಡಿದಗೇನು
ಕಲುಷ ವೃತ್ತಿಯನಾನಲನಿಮಿತ್ತಮೆನಲವನು
 ಭರತಾಗ್ರಜನ್ಮನೊಳು ಮುನಿದಪೆನು ನಾನು.

೭೪

ನನ್ನ ಮಿತ್ರನು ನಿನ್ನ ಮಾವನು ಯಶೋಘನನು
 ಸಜ್ಜನ ಭವೋಚ್ಛೇದಕರನು ತವಪಿತನು
ಅಗ್ರಗಣ್ಯಳು ನೀನು ಪತಿವ್ರತಾಸ್ತ್ರೀಯರೊಳು
 ನೀನೆನ್ನ ದಯೆಗರ್ಹಳೆಲ್ಲರೀತಿಯೊಳು.

೭೫

ಸಾಧು ಸಂಪರ್ಕದೊಳು ನಮ್ರತೆಯನಾಂತಿರುವ
 ಮೃಗಗಳಿರುವಾಶ್ರಮದೊಳಿರು ಭಯವನುಳಿದು
ನಾಳೆಯಿಂತೆನೆಯಿರೆ ಸುಖಪ್ರಸವಮಾದಂದು
 ಜಾತಕರ್ಮಗಳ ನಾನೆಸಗಿದಪೆನೊಲಿದು.

೭೬

ಮುನಿಜನಗಳುಟಜಂಗಳಿಡಿದಿರುವ ತಟನಿಯನು
ತಮಸೆಯನು ಮಿಂದೀ ತಮೋಹಾರಿಣಿಯನು
ಪುಳಿನದುತ್ಸಂಗದೊಳು ದೇವತಾರ್ಚನೆಗಳನು
ನಡಸುತಿರೆ ಪಡೆದಪೆ ಮನಃಪ್ರಸಾದವನು.

೭೭

ಕಾಲಕಾಲಕೆ ದೊರೆವ ಹೂವುಹಣ್ಣನು ತಿರಿದು
ಬಾಲೇಯ ಬೀಜಗಳನುಳದೆಡೆಯಿನಾಯ್ದು
ಬಿನದಂಗಳಿಂದಲೀ ಹೊಸತಳಲನಾರಿಪರು
ವಚನಚತುರರು ನಮ್ಮ ಮುನಿಕನ್ನಿಕೆಯರು.

೭೮

ನಿಜಬಲಕೆ ತಗುವೊಂದು ಜಲಕಲಶದಿಂದೆರೆದು
ಎಲೆವನೆಯ ಎಳೆಸಸಿಯ ಬೆಳಸುವಂದು
ಮಗನ ಮೊಗವನು ಕಾಣ್ಬ ಮೊದಲೆ ನಿನಗರಿವಹುದು
ಕೂಸಿನೊಳು ತಾಯೊಲುಮೆತಾನೆಂಥದೆಂದು.

೭೯

ಕರುಣಾಳು ವಾಲ್ಮೀಕಿ ತಾಂತೋರಿದೊಂದನು—
ಗೃಹಕೊಲಿದು ತನ್ನನಂದಭಿನಂದಿಪಳನು
ಸಂಜೆಯೊಳು ವೇದಿಯೆಡೆ ಹರಿಣಗಳು ಮಲಗಿರುವ
ಶಾಂತಮೃಗದಾಶ್ರಮಕೆ ಕರೆತಂದನಂದು.

೮೦

ಅವಳ ಬರುವಿಕೆಗೊಲಿದ ತಾಪಸಸ್ತ್ರೀಯರೊಳು
ಆ ಶೋಕದೀನೆಯನು ತಾನರ್ಪಿಸಿದನು
ದರ್ಶ ತಾನೋಷಧಿವ್ರಾತಕಿರದರ್ಪಿಪ್ರೊಲು
ಪಿತೃಭುಕ್ತಚಂದ್ರನೊಂದವಶಿಷ್ಟಕಲೆಯ.

೮೧

ಮೇಧ್ಯಕೃಷ್ಣಾಜಿನದ ತಲ್ಪಮಧ್ಯದೊಳೆಸೆಯೆ
ಇಂಗುದೀಸ್ನೇಹದೀಪಸ್ತಂಭಮುರಿಯೆ
ಬೈಗುವೊಳ್ತರ್ಚನೆಯ ಕೊನೆಯೊಳವರವನಿಜೆಯ
ವಾಸಾರ್ಥಮಿತ್ತರಂದೊಳ್ಪಿನೆಲೆವನೆಯ.

೮೨

ಮಿಂದು ಮಡಿಯಾದವಳು ನಾರುಡೆಯನಾಂತವಳು
ಸಂದವಳು ಶಾಸ್ತ್ರದಂತಥಿಪೂಜೆಯೊಳು
ಭರ್ತೃವಿನ ಸಂತಾನದಭಿವೃದ್ಧಿಗೆಂದವಳು
ಕಂದಮೂಲಂಗಳಿಂದೊಡಲ ಪೊರೆಯುವಳು.

೮೩

ಈಗಳಾದೊಡಮರಸು ಸಾನುನಯನಾದಪನೊ
ನೋಳ್ಪೆನೆಂದಿಂದ್ರಜಿತುಜೇತೃ ತಾನಂದು
ಅವನಿಜೆಯ ಪರಿದೇವನಾಂತಮಾದಾಣತಿಯ
ತಾನಾಗುಗೈದುದನು ಪೇಳ್ದನಾಪರಿಯ.

೮೪

ಶ್ರೀರಾಮನಾಕ್ಷಣದೊಳಶ್ರುವನು ಸುರಿಸಿದನು
ತುಹಿನವೃಷ್ಟಿಯ ಕರೆವ ಪೌಷಶಶಿಯಂತೆ
ಕೌಲೀನಭೀತಿಯಿಂದವನಿಜೆಯನಟ್ಟಿದನು
ಮನೆಯಿಂದಲಟ್ಟಿದನು ಮನದಿಂದಲಲ್ತು.

೮೫

ವರ್ಣಾಶ್ರಮಾದಿಗಳನೆಚ್ಚರದೊಳಾರಯ್ದು
ತನ್ನಳಲ ತಾನೆ ಸಂತವಿಸಿಕೊಳುತಂದು
ಭ್ರಾತೃಜನಸಾಮಾನ್ಯಭೋಗಸಾಮ್ರಾಜ್ಯವನು
ಧೀಮಾನನಾಳ್ದನು ರಜೋರಿಕ್ತಮನನು.

೮೬

ಪರಿವಾದಭಯದಿಂದಲಾ ಏಕಭಾರ್ಯೆಯನು
ಸಾಧ್ವಿಯನು ಸೀತೆಯನು ತೊರೆದಟ್ಟಲವನು
ನೃಪನುರದೊಳರುಸೊಗದೆ ಲಕ್ಷ್ಮಿ ತಾಂ ನೆಲಿಸಿರುತೆ
ಮೆರೆದಪಳು ಸವತಿಯಿರದಂತೆಸೆಯುವಂತೆ.

೮೭

ಉಳಿದು ಸೀತೆಯನು ರಾವಣಾರಿ ತಾನನ್ಯನಾರಿಯನು
ಮದುವೆಮಾಡಿಕೊಳಲಿಲ್ಲವೆಂದು ಕೇಳಿ
ತನ್ನ ಪ್ರತಿಕೃತಿಯ ಕನಕಪ್ರತಿಮೆಯನು ಇರಿಸಿಕೊಂಡು ವಿರ-
ಚಿಸಿದನಧ್ವಗಳನೆಂದು ಹರ್ಷ ತಾಳಿ
ಕಿವಿಗೆ ಬಿದ್ದುದನು ಪತಿಯ ವಿಷಯವಾದಿಂಥ ಸುದ್ದಿಯನು
ಜನಕರಾಜಸುತೆ ಮತ್ತೆ ಮತ್ತೆ ಹೇಳಿ
ತನ್ನ ಬಿಟ್ಟುದರಿನಾದ ಕಷ್ಟವನು ಮೂಕಶೋಕವನು
ಎಂತೊ ಸಹಿಸುತಿಹಳಲ್ಲಿ ದೇವಿ ಬಾಳಿ.

---

## ಹದಿನೈದನೆಯ ಸರ್ಗ

# ಶ್ರೀರಾಮಸ್ವರ್ಗಾರೋಹಣ

೧

ಸೀತಾಪರಿತ್ಯಾಗಮಂಗೈದು ಪೃಥ್ವಿಪನು ಶ್ರೀರಾಮನಂದು
ತೋಯನಿಧಿಮೇಖಲೆಯ ಮೇದಿನಿಯನೊರ್ವಳನೆ ಭೋಗಿಸಿದನೊಲಿದು.

೨

ಲವಣರಾಕ್ಷಸನಿಂದಲಳಿದ ಯಜ್ಞಕ್ರಿಯರು ಶರಣಾರ್ಥಿಜನರು
ಮೊರೆಪ್ರೊಕ್ಕರಾಶರಣ್ಯನನಂದು ಯಾಮುನರು ವರಮುನಿಗಳವರು.

೩

ರಕ್ಷಕನು ರಾಮನೆಂದಸುರನನು ನಿಜತೇಜದಿಂದುರಿಸದಿಹರು
ಪೊರೆವರಿಲ್ಲದ ವೇಳೆ ಬೀಯಗೊಳಿಪರು ತಪವನಾಶಾಪಶರರು.

೪

ಪ್ರತಿವಚನವಿತ್ತನಾರಾಘವನು ವಿಘ್ನವನು ನಾಂ ತೊಡೆವೆನೆಂದು
ಧರ್ಮರಕ್ಷಣೆಗೆಂದೆ ದಲ್ ಶಾರ್ಙ್ಗಿ ಭುವಿಯೊಳವತಾರವೆತ್ತಿಹುದು.

೫

ಶೂಲಧರರಾಕ್ಷಸನು ದುರ್ಜಯನು ಗೆಲಲಹುದು ಶೂಲವಿರದಂದು
ಎನುವ ರಕ್ಕಸಕೊಲೆಯ ತಂತ್ರವನು ರಾಘವನಿಗವರೊರೆದರಂದು.

೬

ಬೆಸಸಿದನು ರಾಘವನು ಶತ್ರುಘ್ನ ! ಮುನಿಹಿತವನಾಗುಮಾಡೆಂದು
ಶತ್ರುನಿಗ್ರಹದಿಂದಲನ್ವರ್ಥನಾಮನಂಗೈವವೋಲಂದು.

೭

ರಘುಕುಲಜನಾವಾತನಾದೊಡಂ ಆತನು ಪರಂತಪನು ಸಹಜಂ
ಉತ್ಸರ್ಗಕಪವಾದದಂದದೊಳು ತಾನಹನು ಅರಿಹನನ ದಕ್ಷಂ.

೮

ನಿರ್ಭೀಕನಗ್ರಜನ ಹರಕೆಗೊಂಡಾದಾಶರಥಿ ರಥವನೇರಿ
ಸುರಭಿಯುತ ಪುಷ್ಪಿತವನಸ್ಥಲಿಯ ನೋಡುತ್ತೈದಿದನು ಶೂರ.

೯

ರಾಮನಾದೇಶದಿಂದನುಗಮಿಸಿದಾಸೇನೆ ಅರ್ಥಸಿದ್ಧಿಯನು
ಪಡೆದುದಧ್ಯಯನಾರ್ಥಧಾತುಗುಪಸರ್ಗದವೊಲರ್ಥಸಿದ್ಧಿಯನು.

೧೦

ಘನತೇಜರಧ್ವವನು ತೋರುತ್ತಲಾತೇರ ಮುಂದೈದುವಂದು
ವಾಲಖಿಲ್ಯರ್ಕಳಿಂ ತಳ್ತಂಶುಮಾನನಂತೆಸೆದನಾ ನೃಪನು.

೧೧

ತೀರದನಿ ತಳ್ಳಂಕಗೊಳಿಸಿದೆರಳೆಗಳಿರುವ ವಾಲ್ಮೀಕಿಮುನಿಯು
ಎಲೆವನೆಯೊಳೊಂದಿರುಳು ತಂಗಿದನು ರಾಘವನು ಆದಾರಿಯೆಡೆಯ.

೧೨

ವಾಲ್ಮೀಕಿ ನಿಜತಪೋಬಲದಿಂದಲಣಿಗೊಂಡ ವಸ್ತುಚಯದಿಂದೆ
ಬಳಲಿದಶ್ವಗಳಿರುವ ಆ ರಾಜಪುತ್ರನನು ಪೂಜಿಸಿದನಂದೆ.

೧೩

ಅವಳಿಮಕ್ಕಳ ಪೆತ್ತಳಂದು ಆ ರಾತ್ರಿಯೊಳೆ ಗರ್ಭವತಿ ಸೀತೆ
ಸಂಪೂರ್ಣಕೋಶದಂಡದ್ವಯವನವನಿಸತಿ ತಾಂ ಪಡೆಯುವಂತೆ.

೧೪

ಪ್ರೊಳ್ತರೆಯೊಳೆರಗಿದನು ವಾಲ್ಮೀಕಿಗಣಿಗೊಂಡ ತೇರನೇರಿದನು
ತದ್ಭ್ರಾತೃಸಂತತಿಶ್ರವಣದಿಂ ಸೌಮಿತ್ರಿ ಸುಖದೊಳೈದಿದನು.

೧೫

ಆತನು ಮಧೂಪಘ್ನನಗರವನು ಸಾರಿದನು ಸತ್ತ್ವಾಳಿವೆರೆದು
ಕುಂಭೀನಸೀಸೂನು ಬನದಿಂದಲೈದಿದನು ಬಲಿಯು ತರುವಂತೆ.

೧೬

ಜ್ವಾಲೆವೊಲು ಪಿಂಗಳಶಿರೋರುಹನು ಲವಣನು ವಸಾಗಂಧಯುತನು
ಮಾಂಸಾಶಿಗಣವೆರೆದು ಜಂಗಮಚಿತಾಗ್ನಿವೊಲು ಹೊಗೆಗೆಂಪಿನವನು.

೧೭

ಶೂಲರಹಿತನ ಕಂಡು ತಡೆದನಂದವನನಾಲಕ್ಷ್ಮಣಾನುಜನು
ಮರ್ಮವರಿತರಿಗಳನು ಹೊಡೆವವರಿಗೈತಹುದು ಜಯವು ನಿಶ್ಚಯವು

೧೮

ನನ್ನೊಡಲಿಗಿಂದುಣಿಸು ಕೊರೆಯಾದುದೆಂದರಿತು ಧಾತಾರನವನು
ಸಲೆ ಬೆದರಿ ಭಾಗ್ಯವಶದಿಂದೆನ್ನಬಳಿಗಿಂದು ನಿಸಟ್ಟಿದನ್ನು.

೧೯

ಶತ್ರುಘ್ನನನ್ನಿಂತು ಸಂತರ್ಜಿಸುತ್ತಸುರನವನ ಕೊಲಲೆಂದು
ಮುಷ್ಟಿಯನು ಕೀಳ್ವವೊಲು ಎತ್ತರದ ಮರನೊಂದ ಕಿಳ್ತಿಸೆದನಂದು.

೨೦

ನಿಶಿತಬಾಣಂಗಳಿಂದಸುರನೆಸೆದಾ ಮರವನಂತರದೊಳಿರದೆ
ಸೌಮಿತ್ರಿ ಕತ್ತರಿಸಲಂಗವನು ಸುಮಧೂಳಿ ಸೋಂಕಿದುದು ಭರದೆ.

೨೧

ವೃಕ್ಷನಾಶದ ಬಳಿಕ ರಾಕ್ಷಸನು ಒಂದು ಪೆರ್ಬಂಡೆಯನು ಕಿತ್ತು
ಕಳಚಿ ಬಂದಂತಕನ ಮುಷ್ಟಿವೋಲೆಸೆದನಾ ಸೌಮಿತ್ರಿಗೆತ್ತು.

೨೨

ಇಂದ್ರಾಸ್ತ್ರಮಂ ತೆಗೆದು ಶತ್ರುಘ್ನ ಗುರಿಯಿಟ್ಟು ಎಚ್ಚನದನಂದು
ಮರಳುಕಣಕಣಕಿಂತ ಸಣ್ಣಿತೆನೆ ಚೂರಾದುದೊಡನೆ ಆ ಬಂಡೆ.

೨೩

ಬಲದೋಳು ಮೇಲೆತ್ತಿ ರಾಕ್ಷಸನು ಅವನ ಬಳಿಗೋಡಿದನು ಭರದೆ
ಬಿರುಗಾಳಿಗೋಡುತಿರುವೇಕತಾಲದ್ರುಮದ ಗಿರಿಯೆನುವ ತೆರದೆ.

೨೪

ವೈಷ್ಣವಾಸ್ತ್ರವನೆಸೆಯೆ ದಳಿತೋರುವಕ್ಷನಿಳೆಗುರುಳಿವಿಳ್ದಂದು
ಕಂಪನಮುದೆಲೆವನೆಯ ವಾಸಿಗಳನುಳಿದಿಳೆಯ ಸೇರ್ದುದೈತಂದು.

೨೫

ಆ ಬಿದ್ದ ದಾನವನ ತಲೆಮೇಲೆ ಪಕ್ಷಿಗಣಮೆರಗಿದವು ಬಂದು
ಎದುರಾಳಿಯಾದವನ ತಲೆಮೇಲೆ ದೇವಸುಮ ಸೂಸಿರ್ದುದಂದು.

೨೬

ಇಂದ್ರಜಿದ್ವಧಶೋಭಿಯಾದಾಮಹೋಜಸನಿಗೊಡವುಟ್ಟು ಎಂದು
ಲವಣನನು ಕೊಂದ ಆ ವೀರವರ ಶತ್ರುಘ್ನ ಭಾವಿಸಿದನಂದು.

೨೭

ಚರಿತಾರ್ಥರಾದ ಆ ಋಷಿವರರು ರಘುವರನ ಸಲೆ ಪೊಗಳಿದಂದು
ವಿಕ್ರಮಕೆ ಮೇಲೆತ್ತಿ ವಿನಯಕ್ಕೆ ನಸುಬಾಗಿತವನ ತಲೆಯೆಸೆದು.

೨೮

ಯಮುನೆಯುಪಕೂಲದೊಳುಮಧುರಕೃತಿ ಮಧುರೆಯನು ನಿರ್ಮಿಸಿದನವನು
ವಿಕ್ರಮವಿಭೂಷಣನು ಲಕ್ಷ್ಮಣಸಹೋದರನು ಅರ್ಥನಿರ್ಮಮನು.

೨೯

ಸೌರಾಜ್ಯ ಶೋಭೆಯೊಳು ಪೌರೈಶ್ವರ್ಯದೊಳು ಪುರಿ ಮೆರೆದುದಂದು
ಸ್ಥಳದೊಂದಭಾವದೊಳು ದಿವಿಯಿಂದಲಿಳಿಯಿಸಿದ ಸುರರ ನೆರೆವೋಲು.

೩೦

ಕನಕರಚನಾವತಿಯ ಮೇದಿನಿಯ ಜಡೆಯವೋಲು ಹೊಳೆದು ಹೊಳೆ ಹರಿಯೆ
ಕೋಕವತಿಯಮುನೆಯನು ಸೌಧಗತ ಸೌಮಿತ್ರಿ ನೋಡಿದನು ನಲಿಯೆ.

೩೧

ಮಂತ್ರಕೃತ್ ವಾಲ್ಮೀಕಿಋಷಿವರನ್ ಜನಕದಶರಥ ನೃಪರ ಮಿತ್ರನ್
ಮೈಥಿಲೇಯರಿಗಿತ್ತ ವಿಧ್ಯುಕ್ತರೀತಿಯೊಳು ಸಂಸ್ಕಾರಗೈದನ್.

೩೨

ಕುಶಲವಂಗಳಿನವರ ಗರ್ಭದುಃಖವ ಕಳೆದ ಕಾರಣದೊಳವನು
ಕುಶನೆಂದು ಲವನೆಂದು ಶಿಶುಗಳನು ಹೆಸರಿಸಿದನಂದು ಕವಿವರನು.

೩೩

ವೇದವೇದಾಂಗಗಳನಧ್ಯಯನಗೈಸಿದನು ಶೈಶವಂ ಕಳೆಯೆ
ವರಕವಿಯ ಪ್ರಪ್ರಥಮ ಪದ್ಧತಿಯ ನಿಜಕೃತಿಯ ಪಾಡಿಸಿದನೆಸೆಯೆ.

೩೪

ತಮ್ಮ ತಾಯಿಯ ಮುಂದೆ ರಾಮವೃತ್ತಾಂತವನು ಮಧುರಮೆನೆ ಪಾಡಿ
ತದ್ವಿಯೋಗವ್ಯಥೆಯನೊಂದಿನಿಸು ಕಿರಿದುಗೈದಿರ್ದರಾಸುತರು.

೩೫

ತ್ರೇತಾಗ್ನಿ ತೇಜರಾರಘುವಂಶಸಂಭವರು ಮೂವರುಳಿದವರು
ಒಬ್ಬೊಬರೂ ಪಡೆದರೆರಡೆರಡು ಮಕ್ಕಳನು ತಂತಮ್ಮ ಮಡದಿಯರ್ಕಳೊಳು.

೧೮

ನನ್ನೊಡಲಿಗಿಂದುಣಿಸು ಕೊರೆಯಾದುದೆಂದರಿತು ಧಾತಾರನವನು
ಸಲೆ ಬೆದರಿ ಭಾಗ್ಯವಶದಿಂದೆನ್ನಬಳಿಗಿಂದು ನಿಸಟ್ಟಿದನ್ನು.

೧೯

ಶತ್ರುಘ್ನನನ್ನಿಂತು ಸಂತರ್ಜಿಸುತ್ತಸುರನವನ ಕೊಲಲೆಂದು
ಮುಸ್ತೆಯನು ಕೀಳ್ವವೊಲು ಎತ್ತರದ ಮರನೊಂದ ಕಿಳ್ತೆಸೆದನಂದು.

೨೦

ನಿಶಿತಬಾಣಂಗಳಿಂದಸುರನೆಸೆದಾ ಮರವನಂತರದೊಳಿರದೆ
ಸೌಮಿತ್ರಿ ಕತ್ತರಿಸಲಂಗವನು ಸುಮಧೂಳಿ ಸೋಂಕಿದುದು ಭರದೆ.

೨೧

ವೃಕ್ಷನಾಶದ ಬಳಿಕ ರಾಕ್ಷಸನು ಒಂದು ಪೆರ್ಬಂಡೆಯನು ಕಿತ್ತು
ಕಳಚಿ ಬಂದಂತಕನ ಮುಷ್ಟಿವೋಲೆಸೆದನಾ ಸೌಮಿತ್ರಿಗೆತ್ತು.

೨೨

ಇಂದ್ರಾಸ್ತ್ರಮಂ ತೆಗೆದು ಶತ್ರುಘ್ನ ಗುರಿಯಿಟ್ಟು ಎಚ್ಚನದನಂದು
ಮರಳುಕಣಕಣಕಿಂತ ಸಣ್ಣಿತೆನೆ ಚೂರಾದುದೊಡನೆ ಆ ಬಂಡೆ.

೨೩

ಬಲದೋಳು ಮೇಲೆತ್ತಿ ರಾಕ್ಷಸನು ಅವನ ಬಳಿಗೋಡಿದನು ಭರದೆ
ಬಿರುಗಾಳಿಗೋಡುತಿರುವೇಕತಾಲದ್ರುಮದ ಗಿರಿಯೆನುವ ತೆರದೆ.

೨೪

ವೈಷ್ಣವಾಸ್ತ್ರವನೆಸೆಯೆ ದಳಿತೋರುವಕ್ಷನಿಳೆಗುರುಳಿವಿಳ್ದಂದು
ಕಂಪನಮುದೆಲೆವನೆಯ ವಾಸಿಗಳನುಳಿದಿಳೆಯ ಸೇರ್ದುದೈತಂದು.

೨೫

ಆ ಬಿದ್ದ ದಾನವನ ತಲೆಮೇಲೆ ಪಕ್ಷಿಗಣಮೆರಗಿದವು ಬಂದು
ಎದುರಾಳಿಯಾದವನ ತಲೆಮೇಲೆ ದೇವಸುಮ ಸೂಸಿರ್ದುದಂದು.

೨೬

ಇಂದ್ರಜಿದ್‌ವಧಶೋಭಿಯಾದಾಮುಹೋಜಸನಿಗೊಡವುಟ್ಟು ಎಂದು
ಲವಣನನು ಕೊಂದ ಆ ವೀರವರ ಶತ್ರುಘ್ನ ಭಾವಿಸಿದನಂದು.

೨೭

ಚರಿತಾರ್ಥರಾದ ಆ ಋಷಿವರರು ರಘುವರನ ಸಲೆ ಪೊಗಳಿದಂದು
ವಿಕ್ರಮಕೆ ಮೇಲೆತ್ತಿ ವಿನಯಕ್ಕೆ ನಸುಬಾಗಿತವನ ತಲೆಯೆಸೆದು.

೨೮

ಯಮುನೆಯುಪಕೂಲದೊಳುಮಧುರಕೃತಿ ಮಧುರೆಯನು ನಿರ್ಮಿಸಿದನವನು
ವಿಕ್ರಮವಿಭೂಷಣನು ಲಕ್ಷ್ಮಣಸಹೋದರನು ಅರ್ಥನಿರ್ಮಮನು.

೨೯

ಸೌರಾಜ್ಯ ಶೋಭೆಯೊಳು ಪೌರೈಶ್ವರ್ಯದೊಳು ಪುರಿ ಮೆರೆದುದಂದು
ಸ್ಥಳದೊಂದಭಾವದೊಳು ದಿವಿಯಿಂದಲಿಳಿಯಿಸಿದ ಸುರರ ನೆರೆವೋಲು.

೩೦

ಕನಕರಚನಾವತಿಯ ಮೇದಿನಿಯ ಜಡೆಯವೊಲು ಹೊಳೆದು ಹೊಳೆ ಹರಿಯೆ
ಕೋಕವತಿಯಮುನೆಯನು ಸೌಧಗತ ಸೌಮಿತ್ರಿ ನೋಡಿದನು ನಲಿಯೆ.

೩೧

ಮಂತ್ರಕೃತ್ ವಾಲ್ಮೀಕಿಋಷಿವರನ್ ಜನಕದಶರಥ ನೃಪರ ಮಿತ್ರನ್
ಮೈಥಿಲೇಯರಿಗಿತ್ತ ವಿಧ್ಯುಕ್ತರೀತಿಯೊಳು ಸಂಸ್ಕಾರಗೈದನ್.

೩೨

ಕುಶಲವಂಗಳಿನವರ ಗರ್ಭದುಃಖವ ಕಳೆದ ಕಾರಣದೊಳವನು
ಕುಶನೆಂದು ಲವನೆಂದು ಶಿಶುಗಳನು ಹೆಸರಿಸಿದನಂದು ಕವಿವರನು.

೩೩

ವೇದವೇದಾಂಗಗಳನಧ್ಯಯನಗೈಸಿದನು ಶೈಶವಂ ಕಳೆಯೆ
ವರಕವಿಯ ಪ್ರಪ್ರಥಮ ಪದ್ಧತಿಯ ನಿಜಕೃತಿಯ ಪಾಡಿಸಿದನೆಸೆಯೆ.

೩೪

ತಮ್ಮ ತಾಯಿಯ ಮುಂದೆ ರಾಮವೃತ್ತಾಂತವನು ಮಧುರವೆನೆ ಪಾಡಿ
ತದ್ವಿಯೋಗವ್ಯಥೆಯನೊಂದಿನಿಸು ಕಿರಿದುಗೈದಿರ್ದರಾಸುತರು.

೩೫

ತ್ರೇತಾಗ್ನಿತೇಜರಾರಘುವಂಶಸಂಭವರು ಮೂವರುಳಿದವರು
ಒಬ್ಬೊಬರೂ ಪಡೆದರೆರಡೆರಡು ಮಕ್ಕಳನು ತಂತಮ್ಮ ಮಡದಿಯರ್ಕಳೊಳು.

೩೬

ಶತ್ರುಘ್ನನಾಪೂರ್ವಜೋತ್ಸುಕನು ಮಧುರೆ ಮೇಣ್ ವಿದಿಶೆಗಳನಂದು
ಆ ಬಹುಶ್ರುತರಪ್ಪ ಶತ್ರುಘಾತಿ ಸುಬಾಹುಸುತರುಗಳಿಗೆರೆದು,

೩೭

ವಾಲ್ಮೀಕಿಯಾಶ್ರಮವ ದಾಂಟಿದನು ಮರಳಿ ತಪ ಕೆಡಬಾರದೆಂದೆ
ಮೈಥಿಲೀಸುತಗೀತನಿಶ್ಚಲಿತ ಮೃಗವಿತತಿಯಾಶ್ರಮವ ಪುಗದೆ.

೩೮

ಸಂಸ್ಕಾರದಿಂದೆಸೆವ ವೀಥಿಯ ಅಯೋಧ್ಯೆಯನು ವಶಿ ಪೊಕ್ಕನವನು
ಲವಣನನು ಕೊಂದನೆಂದತ್ಯಂತಗೌರವದೊಳೀಕ್ಷಿಸಲು ಜನರು.

೩೯

ಆ ಸಭಾಮಧ್ಯದೊಳು ಸತ್‌ಸಭಿಕಸೇವಿತನನೀಕ್ಷಿಸಿದನವನು
ಅವನಿಜೆಯನುಳಿದುದರಿನವನಿಯ ಅಸಾಮಾನ್ಯನಾಥನೆನಲವನು.

೪೦

ಲವಣದೈತ್ಯಾಂತಕನನಭಿನಂದಿಸಿದನಗ್ರಭವರಾಮನೊಲಿದು
ಕಾಲನೇಮಿಯ ಕೊಂದ ಹರಿಯ ಸುರನಾಥನೊಲಿದಭಿನಂದಿಪಂತೆ.

೪೧

ಕುಶಲವನು ಕೇಳಿದಂದೆಲ್ಲವನು ಪೇಳಿದನು ಕುಶಲವರನುಳಿದು
ಕಾಲದೊಳು ತಾನೆ ಅದನೊರೆವೆನೆಂದಾದಿಕವಿ ಶಾಸಿಸಿದನೆಂದು.

೪೨

ಜಾನಪದಭೂಸುರನು ಅಪ್ರಾಪ್ತಯೌವನದ ಶಿಶುವಳಿದುದೆಂದು
ಭೂಪತಿಯ ಬಾಗಿಲೊಳು ತೊಡೆಯ ಮೇಲಿಟ್ಟದನು ಅಳುತಿದ್ದನೆಂದು.

೪೩

ದಶರಥಚ್ಯುತೆಯಾಗಿ ರಾಮಕರಗತೆಯಾಗಿ ಹತಭಾಗ್ಯೆ ವಸುಧೆ
ಕಷ್ಟದಿಂ ಕಷ್ಟತರಗತಿಯ ನೀಂ ಪಡೆದಿಂದು ಕಡುದುಃಖಿಯಾದೆ.

೪೪

ರಕ್ಷಕನು ರಾಘವನು ನಾಚಿದನು ಆ ದುಃಖಕಾರಣವ ಕೇಳ್ದು
ಇಕ್ಷ್ವಾಕುರಾಷ್ಟ್ರವನು ಸೋಂಕದು ಅಕಾಲಭವಮರಣ ಹಿಂದೆಂದು.

೪೫

ದುಃಖಿಸುವ ವಿಪ್ರನನು ಸಂತವಿಸಿ ಕ್ಷಣಕಾಲ ಸೈರಿಸುವುದೆಂದು
ನೆನೆದನಾಕೌಬೇರಯಾನವನು ಗೆಲುವೆ ವೈವಸ್ವತನನೆಂದು.

೪೬

ಯಾನದೊಳು ಆತ್ತಶಸ್ತ್ರನು ಕುಳಿತು ಹೊರವಂಟನಾರಘೂದ್ವಹನು
ಆಬಳಿಕ ಮೈಗರೆದು ವಾಗ್ದೇವಿ ಅವನೆದುರು ನುಡಿದಳಿಂತೆಂದು.

೪೭

ಹೇ ರಾಜ ನಿನ್ನ ಜನಗಳಲೊರುವನಪಚಾರವೆಸಗುತ್ತಲಿಹನು
ಹುಡುಕಿ ನಿಲ್ಲಿಸು ಅವನು ಕೃತಕೃತ್ಯನಾಗಲಿಹೆಯದರಿಂದೆ ನೀನು.

೪೮

ಆಪ್ತವಾಕ್ಯವನಿದನು ಕೇಳಿ ತಾಂ ಕಳೆಯಲೆನೆ ವರ್ಣವಿಕ್ರಿಯೆಯ
ವೇಗನಿಷ್ಕಂಪದಾ ಕೇತುವಿನ ಯಾನದೊಳು ಸುತ್ತಿದನು ದಿಶೆಯ.

೪೯

ಮರದ ಹರೆಯೊಳು ಜೋತು ತಲೆಯು ಕೆಳಗಾಗಿ ಹೊಗೆಗಕ್ಷಿ ಕೆಂಪಾಗಿ
ತಪಗೈವನೊರ್ವನನು ಕಂಡನಂದಿಕ್ಷ್ವಾಕುವಂಶಜನು ಹೋಗಿ.

೫೦

ರಾಘವನು ಹೆಸರು ಕುಲಗೋತ್ರಗಳನರುಹೆನಲು ಹೊಗೆಗುಡಿವನಂದು
ಹೇಳಿದನು ಶಂಭುಕನು ಶೂದ್ರನಾನಮರಪದಕೆಳಸಿದಪೆನೆಂದು.

೫೧

ತಪಕನಧಿಕಾರಿಯಾದಿವನಿಂದ ಜನ ದುಃಖಿಸುತ್ತಿರುವರೆಂದು
ತಲೆ ತೆಗೆಯಬೇಕಿವನನೆಂದು ರಾಘವನು ತಾಂ ಶಸ್ತ್ರವನು ಹಿರಿದು,

೫೨

ಹಿಮಸುರಿದು ಕೇಸರಗಳುದುರಿರುವ ತಾವರೆಯ ನಾಳದಿಂದೆಂತು
ಕಿಡಿ ಸುಟ್ಟ ಮೀಸೆಯಿರುವಾನನವ ಕಂಠದಿಂದುರುಳಿಸಿದನಂತು.

೫೩

ರಾಜನೆಯೆ ದಂಡಿಸಿದ ಕತದಿಂದಲೈದಿದನು ಸದ್ಗತಿಯನವನು
ಜಮಾರ್ಗವನ್ನುಳಿದ ದುಷ್ಕರತಪಸ್ಸಿನೊಳು ದೊರೆಯದಿರ್ದುದನು.

೫೪

ಬಳಿಕ ರಘುನಾಥನುಂ ದಾರಿಯೊಳು ತೇಜಸ್ವಿಯಾದಗಸ್ತ್ಯನನು
ಚಂದ್ರನು ಶರತ್ಕಾಲದೊಡವೆರೆಯುವಂದದೊಳು ಸಂಧಿಸಿದನವನು.

೫೫

ಕುಂಭಸಂಭವನಿತ್ತನೊಂದಲಂಕಾರವನು ದಿವ್ಯವಾದುದನು
ತಾಂ ಕುಡಿದ ಕಡಲಂದು ಬಿಡುಗಡೆಯ ಬೆಲೆಯವೊಲು ತೊಡವನಿತ್ತುದನು.

೫೬

ಮೈಥಿಲೀಕಂಠನಿರ್ವ್ಯಾಜಪಾರಬಾಹುಗಳಲಾತೊಡವನಾಂತು
ಶ್ರೀರಾಮನೈತರುವ ಮುನ್ನಮೇ ವಿಪ್ರಸುತನಸುತಳೆದನಿತ್ತ.

೫೭

ಮೃತ್ಯುಭಯದಿಂದೆಯುಂ ಉಳಿಸಿದಪನಿವನೆಂದು ಹೊಗಳಿಕೆಯ ನುಡಿದು.
ಪೂರ್ವೋಕ್ತನಿಂದೆಯನು ತೊಡೆದನಾಸುತಸಮನ್ವಿತನಂದು ನಲಿದು.

೫೮

ಜನ್ನಗುದುರೆಯ ಕಳುಹಿದವನಮೇಲಸುರವಾನರನರೇಶ್ವರರು
ಮೋಡಗಳು ಸಸಿಗೆ ಮಳೆಗರೆವವೊಲು ಕಾಣಿಕೆಯ ಮಳೆಗರೆದರವರು.

೫೯

ಕರೆಕಳುಹಿದಾಮಹರ್ಷಿಗಳಂದು ದೆಸದೆಸೆಯನುಳಿಯುತ್ತೈತಂದರ್
ತಿರೆಯ ತಾಣಂಗಳಲ್ತರಿಲತಾಣಂಗಳುಮನುಳಿದು ತಾಂ ಬಂದರ್.

೬೦

ಸುತ್ತ ಋಷಿಜನರಿಸೆಯೆ ಬೆಳಗಿದುದು ನಾಲ್ದೆಸೆಯ ಬಾಗಲಿನಯೋಧ್ಯೆ.
ಅದೆ ತಾನೆ ಲೋಕವನು ಸೃಜಿಸಿದ ಪಿತಾಮಹನ ತನುವಿದೆನುವಂತೆ.

೬೧

ಜಾನಕೀ ತ್ಯಾಗಮುಂ ಶ್ಲಾಘ್ಯಮಾಪ್ರಾಗ್ವಂಶವಾಸಿಯಾದವನೊಳ್
ಅನ್ಯಕಾಂತಾರಹಿತಗಾಹೇಮಕೃತ ಸೀತೆ ಸತಿಯೆನಿಸಿದಾಗಳ್.

೬೨

ವಿಧಿಗಿಂತಲಧಿಕ ಸಂಭಾರದಿಂದಾರಂಭಮಾದುದಾ ಯಜ್ಞಂ
ತತ್ಕೃತಿಯ ವಿಘ್ನರಹ ರಾಕ್ಷಸರೆ ರಕ್ಷಕರವೋಲಿರ್ಪ ಯಜ್ಞಂ.

೬೩

ವಾಲ್ಮೀಕಿ ಮೊದಲರಿತು ಪೇಳ್ದ ರಾಮಾಯಣವನಲ್ಲಲ್ಲಿ ಸಂದು
ಹಾಡಿದರು ಮೈಥಿಲೇಯರ್ಕಳಾಲವಕುಶರು ಗುರು ಬೆಸಸಿದಂದು.

೬೪

ಚಾರಿತ್ರ ರಾಮನದು ಬರೆದವನು ವಾಲ್ಮೀಕಿ ಗಾಯಕದ್ವಯರು
ಕಿನ್ನರಸ್ವನರೆನಲು ಆವುದರಿನಾಲಿಪರ ಬಗೆ ಸೆಳೆಯದಿಹರು.

೬೫

ತಜ್ಞರು ನಿವೇದಿಸಿದ ರೂಪ ಮೇಣ್ ಗೀತಗಳ ರಮಣೀಯತೆಯನು
ಸಾನುಜನು ರಾಮನು ಕುತೂಹಲದೊಳೀಕ್ಷಿಸಿದನಾಲಿಸಿದನದನು.

೬೬

ಗೀತವನು ಚಿತ್ತವಿಟ್ಟಾಲಿಸಿದ ಸಭೆಯಚ್ಛ್ರುಮುಖಿಯಾದುದಂದು
ಹಿಮಕವಿದ ಪೊಳ್ತರೆಯ ನಿರ್ವಾತದಾವನಸ್ಥಲಿಯೊಂದು ತೆರದೆ.

೬೭

ಕೇವಲ ವಯೋವೇಷವೊಂದನುಳಿದೆಲ್ಲದರೊಳಾ ಜನತೆಯಂದು
ರಾಮಸಾದೃಶ್ಯವನು ಬಾಲರೊಳು ಕಂಡು ಎವೆ ಮಿಡುಕದಿಹುದು.

೬೮

ಪ್ರೀತಿದಾನಂಗಳೊಳು ನೃಪನ ವೀತಸ್ಪೃಹತೆಗಾಜನ ಸಮಂತು
ಚಕಿತಗೊಂಡಂದದೊಳು ಚಕಿತಗೊಳದಿರ್ದ್ವರಾ ನೈಪುಣ್ಯಕಂತು.

೬೯

ಗೇಯ ಶಿಕ್ಷಕನಾರು ಈ ಕೃತಿಯ ಕವಿಯಾರು ಎಂದವರನೊಲಿದು
ರಾಜನೆಯೆ ಕೇಳ್ದಂದು ಪೇಳಿದರು ಬಾಲಕರು ವಾಲ್ಮೀಕಿ ಎಂದು,

೭೦

ಆ ಬಳಿಕ ವಾಲ್ಮೀಕಿ ಬಳಿಗೈದಿ ಸಾನುಜನು ಶ್ರೀರಾಮನಂದು
ತನ್ನೊಡಲನೊಂದನುಳಿದಿತ್ತನಾ ರಾಜ್ಯವನು ಮುನಿವರನಿಗೊಲಿದು.

೭೧

ಮೈಥಿಲಿಯ ಮಕ್ಕಳಿವರಿರುವರುಂ ನಿನ್ನ ಸುತರೆಂದವನಿಗೊರೆದು
ಕರುಣಾಳು ಕವಿವರನು ಬೇಡಿದನು ಸೀತೆಯನು ಪತಿಕರಿಪುದೆಂದು.

೭೨

ನಿನ್ನ ಸೊಸೆ ನಮ್ಮೆದುರೊಳಗ್ನಿಪರಿಪೂತಳಾಗಿಹಳಹುದು ತಾತ
ದನುಜದೌರಾತ್ಮ್ಯದಿಂದೀಜನರು ಸೀತೆಯೊಳು ನೆಚ್ಚನಿಡದಿಹಿರು.

೭೩

ತನ್ನ ಚಾರಿತ್ರ್ಯದೊಳು ಜನರು ವಿಶ್ವಾಸವನ್ನಿಡುವವೊಲು ಸೀತೆ
ನೆಗಳುವೊಡೆ ಮಕ್ಕಳೊಡನಾಕೆಯನು ಸೇರುವೆನು ತಮ್ಮಾಜ್ಞೆಯಂತೆ.

೭೪

ಮಾತುಗೊಡಲಿಂತರಸು ಶಿಷ್ಯರನು ಬಳಿಯಟ್ಟೆ ವಾಲ್ಮೀಕಿಯಂದೆ
ಜಾನಕಿಯ ಕಸೆಸಿದನು ಸಿದ್ಧಿಯನು ಕರೆಸುವೊಲು ನಿಯಮಂಗಳಿಂದೆ.

೭೫

ಪ್ರಕೃತಕಾರ್ಯಾನುರತಸಂಧಾನರಾಘವನು ಮರುಹಗಲೊಳಿರದೆ
ನೆರೆಯಿಸಿದನಾಪೌರರೆಲ್ಲರನು ಕವಿಯನುಂ ಬರಿಸಿದನು ಭರದೆ.

೭೬

ಹೊಳೆಹೊಳೆವ ರವಿಯನಾಸ್ವರಶಬ್ದಶುದ್ಧಿಯುತಮಂತ್ರದೊಲು ಮುನಿಯು
ತೇಜೋಭಿರಾಮನನು ಸೇರಿದನು ಸುತೆಸಮನ್ವಿತೆಸೀತೆಯೊಡನೆ.

೭೭

ಕಾಷಾಯಪರಿವೀತದಿಂದೆ ಮೇಣ್ ನಿಜಪದಾರ್ಪಿತ ಚಕ್ಷುವಿಂದೆ
ಶಾಂತತನುವೆತ್ತವಳು ಶುದ್ಧಳಹುದೆಂಬೂಹೆ ಸಂಭವಿಸಿತಂದೆ.

೭೮

ಆಲೋಕಪಥದಿಂದಲಕ್ಷಿಯನು ತಿರುಗಿಸುತಲಾ ಸರ್ವಜನರು
ಫಲಿತಶಾಲಿಯವೋಲು ಅವನತಾನನರೆನಲು ನಿಂದಿರ್ದರವರು.

೭೯

ಆಸನಾಸೀನಮುನಿ ಬೆಸಸಿದನು ಬಾ ಮಗಳೆ ನಾಥನೆದುರಿಂದು
ನಿಜಚರಿತವಿಷಯದೊಳು ಲೋಕವನು ನಿಸ್ಸಂಶಯಂಗೊಳಿಸು ಎಂದು.

೮೦

ವಾಲ್ಮೀಕಿ ಶಿಷ್ಯನಂದೆರೆದ ಪುಣ್ಯಾಂಬುವಿಂದಾಚಮನಗೈದು
ಸೀತೆಯುಚ್ಚರಿಸಿದಳು ಆಬಳಿಕ ನಿಜಸರಸ್ವತಿಯನಿಂತೆಂದು.

೮೧

ವಾಙ್ಮನಃಕಾರ್ಯಂಗಳಿಂದಲವ್ಯಭಿಚಾರಿಯಾಗಿರ್ದೊಡಾನು
ದೇವಿ ವಿಶ್ವಂಭರೆಯೆ ನಿನ್ನೊಡಲೊಳೆನ್ನನೊಳವೊಗಿಸಿಳೆಯೆ ನೀನು.

೮೨

ಸಾಧ್ವಿಯಿಂತೆಂದೊಡನೆ ಭುವಿ ಬಿರಿದು ರಂಧ್ರದಿಂದೊಗೆತಂದುದಂದು
ವೈದ್ಯುತಜ್ಯೋತಿಯಂತೆಸೆವ ಉದ್ಯತ್ಪ್ರಭಾಮಂಡಲಮುದೊಂದು.

೮೩

ನಾಗರಾಜನ ಹೆಡೆಯ ಮಣಿಯ ಸಿಂಹಾಸನದೊಳಾಸೀನಳೆನಿಸಿ
ಉದಧಿಮೇಖಲೆಯ ಸಾಕ್ಷಾತ್ವಸುಂಧರೆಯೆ ವೈತೋರ್ದಳೊಡನೆಳಸಿ.

೮೪

ಭರ್ತೃದತ್ತೇಕ್ಷಣೆಯನಂಕದೊಳು ಕುಳ್ಳಿರಿಸಿಕೊಂಡು ಭೂದೇವಿ
ಪಾತಾಳಕ್ಕೈದಿದಳು ಬೇಡಬೇಡೆಂದರಸು ಬೇಡುತಿರಲೋವಿ.

೮೫

ಮರಳಿತಹೆನವನಿಜೆಯನೆಂದು ಕೋದಂಡವನು ಹಿಡಿದಿಳೆಯೊಳಂದು
ಕೋಪಗೊಂಡರಸನನು ವಿಧಿಬಲಾಪೇಕ್ಷಿಗುರು ಶಾಂತಗೊಳಿಸಿದನು.

೮೬

ಬೀಳ್ಕೊಂಡು ಋಷಿಗಳನು ಸುಹೃದರನು ಯಜ್ಞಾಂತಸತ್ಕೃತರನವನು
ಸೀತೆಯೊಳು ತಳೆದೊಂದು ಮಮತೆಯನು ಮಕ್ಕಳೊಳು ತೋರಿದನುನೃಪನು.

೮೭

ಆ ಯುಧಾಜಿತ್ತಿನೊಂದಾದೇಶದಿಂದಂದು ವರಭೃತಪ್ರಜನು
ಸಿಂಧು ದೇಶವನಿತ್ತನಾದತ್ತಮಹಿಮಂಗೆ ಭರತಂಗೆ ನೃಪನು.

೮೮

ಯುದ್ಧದೊಳು ಗಂಧರ್ವರನು ಗೆಲಿದು ಭರತನವರಾಯುಧವನುಳಿದು
ಮುಂದೆ ತಾನಾತೋದ್ಯಮಾತ್ರವನು ಧರಿಸುವೊಲು ಗೈದಿರ್ದನಂದು.

೮೯

ಭರತನಭಿಷೇಕಾರ್ಹಪುತ್ರರನು ತಕ್ಷಪುಷ್ಕಲರನಂದೊಲಿದು
ತಕ್ಷಪುಷ್ಕಲದೊಳಭಿಷಿಕ್ತರಂಗೈದು ಬಂದನು ರಾಮನೆಡೆಗೆ.

೯೦

ಲಕ್ಷ್ಮಣನುಮಾತ್ಮಸಂಭವರೆನಿಪ ಚಂದ್ರಕೇತಾಂಗದರ ಕರೆದು
ರಘುನಾಥ ಶಾಸನದೆ ಕಾರಾಪಥಾಧೀಶರಂಗೈದನಂದು.

೯೧

ತನುಭವರನಿಂತಿರಿಸಿ ರಾಜ್ಯದೊಳು ಕಾಲಬರಲಾಜನೇಶ್ವರರು
ಭರ್ತೃಲೋಕಕೆ ಸಂದ ಜನನಿಯರಿಗುತ್ತರಕ್ರಿಯೆಗೈದರವರು.

೯೨

ರಾಘವಂಗಿಂತೆಂದನೊರ್ಕೆ ಮುನಿವೇಷದಿಂ ಕಾಲನೈತಂದು
ಗುಟ್ಟಿನೊಳು ಮಾತಾಡುತಿರಲಾವು ನೋಡುವನ ನೀಂ ತ್ಯಜಿಪುದೆಂದು.

೯೩

ಅಂತಾಗಲೆಂದೊರೆದ ಸಮಯವನು ರಾಮಂಗೆ ಯಮನು ತಾಂ ಪ್ರತ್ಯಕ್ಷನಾಗಿ
ಹೇಳಿದನು ಪರಮೇಷ್ಠಿಯಾಜ್ಞೆಯಿದು ದಿವಿಗೆ ನೀನೈತರ್ಪುದೆಂದು.

೯೪

ತಿಳಿದಿರ್ದುಮವರೊಂದು ಸಮಯವನು ಮುರಿದನಾದ್ವಾಃಸ್ಥ ಲಕ್ಷ್ಮಣನು
ರಾಮನನು ನೋಡಲೆಂದೈತಂದ ದೂರ್ವಾಸ ಶಾಪಬಾಧಿತನು.

೯೫

ಒಡನೆ ಸರಯೂತೀರಕೈತಂದು ಸೌಮಿತ್ರಿ ವರಯೋಗವಿದನು
ಆತ್ಮದೇಹವನುಳಿಯುತಗ್ರಜನ ನನ್ನಿಯನು ಕಾಯ್ದನೆಂದವನು.

೯೬

ಸ್ವಾತ್ಮದೊಳು ನಾಲ್ಕನೆಯ ಭಾಗವಂತಾದಿವಕೆ ಸಂದಬಳಿಕಂದು
ಮೂರಡಿಯ ಧರ್ಮದೊಲು ಶಿಥಿಲನೆನೆ ರಾಘವನು ನೆಲಸಿದನು ಕುಸಿದು.

೯೭

ರಾಘವನು ಆ ಕುಶಾವತಿಪುರದೊಳರಿಗಜಾಂಕುಶ ಕುಶನನಿರಿಸಿ
ಸೂಕ್ತಿಯಿಂ ಸುಜನಾಶ್ರುಲವಬರಿಸ ಲವನಂ ಶರಾವತಿಯೊಳಿರಿಸಿ,

೯೮

ಸಾನುಜನು ಅಗ್ನಿಸಹಿತುತ್ತರಕೆ ತೆರಳಿದನು ಸ್ಥಿರಬುದ್ಧಿಯುತನು
ಭರ್ತೃವಾತ್ಸಲ್ಯದೊಳಯೋಧ್ಯೆಯನುಸರಿಸಿದುದು ವಸತಿಗಳ ತೊರೆದು.

೯೯

ನೀಪಮುಕುಳಸ್ಥೂಲಜನತಾಶ್ರುಕಣತೊಯ್ಸಿದಧ್ವವಿಡಿದೊಲಿದು
ಹರಿದನುಜರನುಸರಿಸಿ ನಡೆದರಾರಾಘವನ ಚಿತ್ತಜ್ಞರಂದು.

೧೦೦

ಭಕ್ತಾನುಕಂಪೆಯಿಂದಾಪ್ರಾಪ್ತಪುಷ್ಪಕನು ಅನುಯಾಯಿ ಜನಕೆ
ಸಾರುವೊಂದೇಣಿವೋಲೆಸಗಿದನು ಸರಯುವನು ಸಾರುವೊಡೆ ದಿವಕೆ.

೧೦೧

ಅಂದಾದ ಮಜ್ಜನದ ಸಮ್ಮರ್ದ ಗೋಪ್ರತರದೋಲೊಗೆದ ಕತದೆ
ಗೋಪ್ರತರತೀರ್ಥಮೆಂದಾತಾಣಮೆಸೆದಿರ್ದುದೊಡನಂದಿನಿಂದೆ.

೧೦೨

ದೇವಾಂಶರಾದವರು ನಿಜರೂಪದಿಂದಲ್ಲಿ ದಿವಿಯೊಳಿರುವಂದು
ಸುರರಾದ ಪೌರರಿಗೆ ಬೇರೊಂದು ನಾಕವನು ಕಲ್ಪಿಸಿದನೊಲಿದು.

೧೦೪

ದಶಮುಖದೈತ್ಯನ ಶಿರವನು ತರಿದನು
ಅಮರರ ಕಾರ್ಯವನೆಸಗಿದನು
ಉತ್ತರಗಿರಿಯೊಳು ಲಂಕೇಶ್ವರನನು
ದಕ್ಷಿಣಗಿರಿಯೊಳು ಹನುಮನನು
ಈರ್ವರನಂತಾ ವಿಶ್ವಕ್ಸೇನನು
ಕೀರ್ತಿಸ್ತಂಭದೊಲಿರಿಸಿದನು
ಲೋಕಸಮಸ್ತವ ಪೊರೆಯುವ ತನುವನು
ಆ ಬಳಿಕಾತನು ಸೇರಿದನು.

# ಹದಿನಾರನೆಯ ಸರ್ಗ

# ಕುಮುದ್ವತೀಪರಿಣಯ

೧

ಜನ್ಮದೊಳು ಗುಣದೊಳಂ ಜ್ಯೇಷ್ಠನಾದಾಕುಶನು
ಬಳಿಕ ರತ್ನವಿಶೇಷಪಾತ್ರನೆಂದು
ಉಳಿದೇಳು ರಘುವರರು ಕಟ್ಟಿದರು ಪಟ್ಟವನು
ಸೌಭ್ರಾತ್ರಮವರೊಳು ಕುಲಾನುಗತವು.

೨

ಸೇತುವಾರ್ತಾನಾಗಬಂಧಾದಿ ಸಫಲಕ—
ರ್ಮಂಗಳಿಂದೇಳಿಗೆಯ ಪಡೆದುಮವರು
ವೇಲೆಯನು ದಾಂಟದಿರುವಬ್ಧಿವೊಲು ತಂತಮ್ಮ
ನಾಡುಗಳ ಎಲ್ಲೆಯನು ದಾಂಟದಿಹರು.

೩

ದಾನಪ್ರವೃತ್ತಿಯೊಳು ಸಾಂತತ್ಯವನು ಮೆರೆವ
ಸಾಮಭವ ಸುರಗಜಗಳೆಂಟರೋಲು
ದಾನಪ್ರವೃತಿಯೊಳು ಸಾಂತತ್ಯವನು ಮೆರೆವ
ಹರಿವಂಶಸಂಭವರ ಬಳಿ ಬೆಳೆದುದು.

೪

ಸ್ತಿಮಿತಪ್ರದೀಪದೊಳು ಕುಶನರ್ಧರಾತ್ರಿಯೊಳು
ಪರಿಜನರು ಮಲಗಿದಂದೆಳ್ಚರಿರಲು
ಮುನ್ನ ಕಂಡಿರದೊರುವ ಪಥಿಕವನಿತೆಯನಂದು
ಶಯನಮಂದಿರದಲ್ಲಿ ಕಂಡನವನು.

೫

ಸಾಧುಸಾಧಾರಣ ಕ್ಷತ್ರಿಯಶ್ರೀಯುತನು
ಬಂಧುಯುತನಿಂದ್ರನಿಭನರಿಜೇತನು
ಮೆರೆಯುತಿರಲಾಕುಶನು ಆತನೆದುರಾವನಿತೆ
ಬೊಗಸೆಗೈಮುಗಿಯೆ ಜಯವೆಂದು ನುಡಿದು,

೭

ದೇಹಪೂರ್ವಾರ್ಧದಿಂದುಳಿದು ವರತಲ್ಪವನು
ವಿಸ್ಮಯದೊಳಾದಾಶರಥಿಪುತ್ರನು
ಅರ್ಗಳವ ತೆಗೆಯದೆಯೆ ಕನ್ನಡಿಯ ನೆಳಲೆಂತು
ಅಂತುವೊಳವೊಕ್ಕವಳಿಗೊರೆದನಿಂತು.

೭

ಬಾಗಿಲನು ಮುಚ್ಚಿರುವ ಮನೆಯೊಳಗೆ ಬಂದಿರುವೆ
ಆದರೂ ಕಾಣಿಸದು ಯೋಗಮಹಿಮೆ
ಹಿಮಬಾಧೆಯಾಂತಿರುವ ನಳನಿವೊಲು ದುಃಖಿಸುವೆ
ದುಗುಡದೊಂದಾಕೃತಿಯ ತೋರುತಿರುವೆ.

೮

ನೀನಾರು ಓ ಶುಭೆಯೆ ಮೇಣಾರ ಮನೆಯವಳು
ಮೇಣೆನ್ನ ಬಳಿಗಿಂದು ಬಂದುದೇಕೆ?
ಸಂಯಮಿರಘೂದ್ವಹರು ಅನ್ಯಾಂಗನಾವಿಮುಖ—
ರೆಂಬುದನು ಬಗೆದು ನೀನೆನ್ನೊಳುಸುರು.

೯

ಆವ ನಗರದೊಳಂದು ನಿಜಪದೋನ್ಮುಖಪಿತನು
ಪೌರರನು ತನ್ನೊಡನೆ ಕೊಂಡೊಯ್ದನು
ಆ ನಗರದಧಿದೇವಿ ವೀತನಾಥಳು ನಾನು
ಇಂತರಿವುದೆಂದೊರೆದಳಾ ಅವಂಧ್ಯೆ.

೧೦

ವೈಭವದ ಸೌರಾಜ್ಯಭದ್ರೋತ್ಸವಂಗಳಲಿ
ಅಲಕೆಯುಮನಿಳಿಕೆಗೈದಿರ್ದೆನಂದು
ಅಧಿಕಬಲನಿರ್ದೊಡಂ ಸೂರ್ಯವಂಶನು ನೀನು
ನೋಡಿನಿತು ದೀನತೆಯನಾಂತೆನಿಂದು.

೧೧

ಉಡಿದೊಡೆದ ತಲ್ಪಾಟ್ಟಶತಗಳುಂ ಕುಸಿದುರುಳ್ದ
ಕೋಂಟೆಗಳುಮಳಿದಂದು ನಮ್ಮ ಪ್ರಭುವು
ಸೂರ್ಯನಸ್ತಮಿಸಿದಂದುಗ್ರಮಾರುತ ಭಿನ್ನ
ಮೇಘಯುತ ಸಂಧ್ಯೆಯನು ಅಣಕಿಸುವುವು.

೧೨

ಲಸಿತಕಲನೂಪುರದ ರಸಿಕಾಭಿಸಾರಿಕೆಯ—
ರೊಸೆದು ಚರಿಯಿಸುತಿರ್ದ ರಾಜಪಥವು
ಮೊಗದೊಳೆಸೆವುಲ್ಕದಿಂದಡಗನರಸುತಲಿಂದು
ಕೂಗುತಿಹ ಬಳ್ಳುಗಳಿಗೆಡೆಯಾದುದು.

೧೩

ಪ್ರಮದೆಯರ ತುದಿಗೈಯ ತಾಡನಗಳಿಂದಂದು
ಮದ್ದಳೆಯ ದನಿಗೈದ ಕೊಳದ ಜಲವು
ತಾನಿಂದು ಅಳುವ ದನಿಗೈಯುತ್ತಲೂಳುವುದು
ಕಾಡೆಮ್ಮೆ ಕೋಡುಗಳ ಕುಟ್ಟಿದಂದು.

೧೪

ವಾಸಯಷ್ಟಿಗಳಳಿಯಲಡವಿ ಮರಗಳನೇರಿ
ಮದ್ದಳೆಯ ದನಿಯಳಿಯೆ ಕುಣಿವುದುಳಿದು
ಅಡವಿಸೋಗೆಗಳಾದವಾಟದ ಮಯೂರಗಳು
ಕಾಳ್ಕಿಚ್ಚು ಸುಟ್ಟುರಿಸಿದೆರಡು ಗರಿ ತೋರಿ.

೧೫

ಸುಂದರಿಯರಲತಿಗೆಯ ಚೆನ್ನಡಿಗಳಿಂದೆಸೆದ
ದೀರ್ಘಿಕೆಯ ಸೋಪಾನ ಮಾರ್ಗವಿಂದು
ಹುಲಿಗಳಡಿಯಿಡುತಿರಲು ಹುಲ್ಲೆಗಳನದೆ ಕೊಂದ
ನೆತ್ತರಿನ ಹೆಜ್ಜೆಯೊಳು ಕೊಳೆಗೊಂಡುದು.

೧೬

ಪದ್ಮವನದೊಳಗಿಳಿದು ಪಿಡಿಯಿತ್ತ ಬಿಸಜವನು
ತಿನ್ನುವೊಲು ಚಿತ್ರಿಸಿರುವಾನೆಗಳನು
ಕುಂಭಗಳನಂಕುಶೋಪಮನಖಗಳಿಂದೊಡೆದು
ಕೆಡಹುತಿವೆ ಕೋಪದೊಳು ಹರಿಗಳಿಂದು.

೧೭

ವರ್ಣರೇಖೆಗಳಳಿದು ಧೂಸರತೆಯಾಂತಿರುವ
ಮದನ ಕೈಗೊಂಬೆಗಳ ಮೇಲೆ ಸುಳಿದು
ಹಾವುಗಳು ಬಿಟ್ಟಿರುವ ಪೊರೆಗಳಾಗಿಹವಿಂದು
ಮೊಲೆಯ ಮೇಲುದುವೋಲು ನೋಡು ಬಂದು.

೧೮

ಉಪ್ಪರಿಗೆ ಮನೆಗಳಲಿ ಕಾಲವಶದಿಂದಿಂದು
ಸುಣ್ಣ ಮಾಸುತ ಬಂದು ಹುಲ್ಲು ಬೆಳೆದು
ಮುತ್ತಿನೊಲು ಹೊಳೆಹೊಳೆವ ಚಂದಿರನ ಕಿರಣಗಳು
ಮಾರ್ಪೊಳೆಯದಿಹವಲ್ಲಿ ರಾತ್ರಿ ಹೊತ್ತು.

೧೯

ಮನೆಯ ಕಿಟಕಿಗಳಲ್ಲಿ ಹಗಲು ಹೊತ್ತಿನೊಳಲ್ಲಿ
ವನಿತೆಯರ ಮುಖಕಾಂತಿ ತೋರದಿಹುದು
ರಾತ್ರಿ ದೀಪದಕಾಂತಿ ಕಾಣಿಸದು ಕಂಪು ಹೊಗೆ—
ಯನು ತಡೆದು ಜೇಡ ಬಲೆಗಟ್ಟುತಿಹುದು.

೨೦

ಕೊಂಬೆಗಳನಳ್ಕರಿಂದೊದಿನಿಸು ಬಾಗಿಸುತೆ
ಊರಿನ ವಿಲಾಸಿನಿಯರಲ್ಲಿ ಬಂದು
ಹೂವುಗಳನಾಯುತಿರ್ದುದ್ಯಾನಲತೆಗಳನು
ಕಪಿವಿಂಡು ತರಿಯುತಿವೆ ಬೇಡರಂತೆ.

೨೧

ಮರಳದಂಡೆಯ ಮೇಲೆ ಬಲಿಯ ಕುರುಹುಗಳಿಲ್ಲ
ನೀರಿನೊಳು ಪರಮಳ ದ್ರವ್ಯವಿಲ್ಲ
ಬಳಿಯ ಬಳ್ಳಿಯ ಮನೆಯೊಳೋಪರುಗಳಾರಿಲ್ಲ
ನೋಡಿ ಸರಯೂಜಲವನಳು ಬರುವುದಲ್ಲ.

೨೨

ಆದುದರಿನೀಬೀಡು ತೊರೆದಿಂದು ಸೇರುವುದು
ಕುಲರಾಜಧಾನಿಯನು ನೀನೆನ್ನನು
ಸಂದ ಕಾರಣತನುವ ತಂದೆ ತಾನಿರದುಳಿದು
ಪರಮಾತ್ಮರೂಪವನು ಸೇರಿದಂತೆ.

೨೩

ರಘುನೃಪರೊಳುತ್ತಮನು ತಥ್ವಾಂಛೆಗೊಪ್ಪಿದನು
ಸಂತೋಷದಿಂದಲಂತಾಗಲೆಂದು
ನಗರಾಧಿದೇವಿಯುಂ ಮನುಜರೂಪವನುಳಿದು
ತಾಂ ತಿರೋಹಿತೆಯಾದಳಂದು ನಲಿದು.

೨೪

ಆ ಇರುಳಿನದ್ಭುತವನುದಯದೊಳು ನೃಪವರನು
ಸಭೆಯೊಳಾ ಬ್ರಾಹ್ಮಣರಿಗರುಹಿರ್ದನು
ಕುಲರಾಜಧಾನಿ ತಾನ್ಯೆತಂದು ವರಿಸಿದಳು
ಕುಶನನೆಂದವರು ಅಭಿನಂದಿಸಿದರು.

೨೫

ಶ್ರೋತ್ರಿಯರಿಗೀಯುತೆ ಕುಶಾವತಿಯನಾಕುಶನು
ಯಾತ್ರಾನುಕೂಲವಹ ಶುಭತಿಥಿಯೊಳು
ಸೇನೆಯನುಸರಿಸಿಬರಲಭ್ರಚಯದನಿಲನೊಲು
ತೆರಳಿದನಯೋಧ್ಯೆಗವರೋಧಯುತನು.

೨೬

ಪೇರಾನೆ ಬಳಗಂಗಳಾಟದದ್ರಿಗಳಾಗೆ
ಬಾವುಟಗಳೋಳಿಯುಪವನಗಳಾಗೆ
ತೇರುಗಳೆ ಚೆಲುವಾದ ಮನೆಗಳೆನಲಾಸೇನೆ
ತಾನೆ ಜಂಗಮರಾಜಧಾನಿಯಾಯ್ತು.

೨೭

ಮಂಡಲಾಕಾರದೊಳು ಹೊಳೆವ ಬೆಳ್ಗೊಡೆಯವನು
ಪೂರ್ವಾಸಸ್ಥಳಕೆ ವಾಹಿನಿಯನು
ಉದಯಿಸಿದ ಚಂದಿರನು ಮೊರೆವ ವಾರಾಶಿಯನು
ವೇಲೆಯೆಡೆಗೊಯ್ವವೊಲು ಕೊಂಡೊಯ್ದನು.

೨೮

ಮುಂದುಮುಂದಕೆ ನಡೆವ ವಾಹಿನಿಯ ಪದಹತಿಯ
ಪೀಡೆಯನು ಸಹಿಸಲಸಮರ್ಥೆಯೆಂದು
ತಾನಿಂದು ಭೂದೇವಿ ಹುಡಿಯ ರೂಪವನಾಂತು
ಎರಡನೆಯ ಹರಿಪದವನೇರ್ದಳಹುದು.

೨೯

ಪುರದೆ ಪೊರಮಡುವಂದು ದಾರಿಯೊಳು ನಡೆವಂದು
ನಡುನಡುವೆ ಬೀಡಬಿಟ್ಟಳಿಯುವಂದು
ಎಲ್ಲಿ ನೋಡಿದರಲ್ಲಿ ಪರಿಪೂರ್ಣಮೆನುವವೊಲು
ನೋಟಕರಿಗಾಸೇನೆ ಕಂಡಿತಂದು.

೩೦

ನೇತಾರನಾನೆಗಳ ಮದವಾರಿಸೇಕದೊಳು
ಮೇಣವನ ಕುದುರೆಗಳ ಖುರಹತಿಯೊಳು
ಧೂಳು ಕೆಸರಾದತ್ತು ನಡೆವಂದು ದಾರಿಯೊಳು
ಕೆಸರು ಧೂಳಾದತ್ತು ಪರಿವಿಡಿಯೊಳು.

೩೧

ಮುಂದೆ ದಾರಿಯ ಹುಡುಕುತಲ್ಲಿ ಕವಲುಗಳೊಡೆದು.
ರೇವೆವೊಲು ರವಗೈದು ಸೇನೆ ನಡೆದು
ಗವಿಯ ಮಾರ್ದನಿಯಿಂದಲಮಿತಶಬ್ದಂಬಡೆದು
ವಿಂಧ್ಯಕಟಕಾಂತರದೊಳೈದಿತಂದು.

೩೨

ಕಾವಿಯರೆಗಳಲುರುಳುತರುಣಗೊಂಡರೆಯಿರುವ
ಬಗೆಬಗೆಯ ತೂರ್ಯರವ ಬೆರೆದು ಮೊರೆವ
ದಂಡಿನಿಂದೊಡವೆರೆದು ಮುಂದೆ ನಡೆದನು ಕುಶನು
ಬೇಡರೊಲಿದಿತ್ತುದನು ನೋಡಿ ನಲಿದು.

೩೩

ಗಜಸೇತುಬಂಧದಿಂದುತ್ತರಿಸಿ ತೀರ್ಥವನು
ಪಶ್ಚಿಮಕೆ ತಿರುಗಿರುವ ಜಾಹ್ನವಿಯನು
ಗಗನಲಂಘನಲೋಲಪಕ್ಷಗಳ ದೆಸೆಯಿಂದೆ
ಹಂಸಗಳಯತ್ನ ಚಾಮರಗಳೆನಲು.

೩೪

ಕಪಿಲಮುನಿ ರೋಷದಿಂದವನ ಪೂರ್ವಜರಂದು.
ಭಸ್ಮಾವಶೇಷೀಕೃತಾಂಗರೆನಲು
ಅವರ ಸ್ವರ್ಗಪ್ರಾಪ್ತಿಗಾಕಾಶದಿಂದಿಳಿದ
ನೌಲುಲಿತ ಗಂಗೆಯನು ವಂದಿಸಿದನು.

೩೫

ಕೆಲದಿವಸದಧ್ವವನು ಕಳೆದಿಂತು ಕುಶವರನು
ಸರಯೂನದೀತೀರದೆಡೆಯನೈದಿ
ವಿಸ್ತೃತಾಧ್ವರನೃಪರ ವೇದಿಮಧ್ಯದೊಳೆಸೆವ
ಶತಶತಸ್ತಂಭಗಳನೀಕ್ಷಿಸಿದನು.

೩೬

ಸರಯೂತರಂಗಾಂಬುಕಣಸಂಗಶೀತಲನು
ಆಧೂತತರುಪುಷ್ಪಗಂಧವಹನು
ಕುಲರಾಜಧಾನಿಯಿಂದುಪವನಸಮೀರಣನು
ಕ್ಲಾಂತಕುಶನೃಪನಿಗಂದಿದಿರೆಳ್ದನು.

೩೭

ರಿಪುಮುಗ್ನಶಲ್ಯನಾ ನಗರೋಪಶಲ್ಯದೊಳು
ಅಮಿತಬಲನಾಕುಶನು ಪೌರಸಖನು
ಚಂಚಲಧ್ವಜರಾಜಿಯಿಂದೆಸೆವ ಸೇನೆಯನು
ನಿಲಿಸಿದನು ನಿಜಕುಲಧ್ವಜನು ನೃಪನು.

೩೮

ಮಿಳಿತೋಪಕರಣದಿಂದಾತೆರದ ನಗರವನು
ಪ್ರಭುನಿಯೋಜಿತ ಶಿಲ್ಪಿಸಂಘದವರು
ಮಳೆಗರೆದು ಮೇಘವು ನಿದಾಘತಪ್ತೋರ್ವಿಯನು
ಪೊಸತುಗೈವಂದದಿಂದೆಸಗಿರ್ದರು.

೩೯

ವರದೇವತಾಯತನದಿಂದೆಸೆವ ನಗರವನು
ತಾಮುಪೋಷಿತವಾಸ್ತುವಿಧಿವೇತ್ತರು
ಪಶುಬಲಿಸಮರ್ಪಣದಿನರ್ಚನೆಯನೆಸಗಿದರು
ರಘುವರನು ಅರ್ಚನೆಯನೀಕ್ಷಿಸಿದನು.

೪೦

ಕಾಮಿ ಹೊಗುವಂದದೊಳು ಕಾಮಿನಿಯ ಹೃದಯವನು
ಆ ರಾಜಭವನವನು ಹೊಕ್ಕು ಕುಶನು
ಉಚಿತಭವನಗಳಿಂದಲನುಜೀವಲೋಕವನು
ಸಂಭಾವಿಸಿರ್ದನಾ ರಾಮಸೂನು.

೪೧

ಲಾಯದೊಳು ಕುದುರೆಗಳು ಕಂಬದೊಳಗಾನೆಗಳು
ವಸ್ತುಚಯವಂಗಡಿಯ ಬೀದಿಗಳೊಳು
ಅಣಿಗೊಂಡ ಪುರವೆಸೆದುದಾಭರಣಮಾಲೆಗಳು
ಮೆಯ್ಯೊಳಣಿಗೊಂಡೆಸೆವ ನಾರಿವೋಲು.

೪೨

ಪೂರ್ವಶೋಭೆಯನಾಂತು ಮತ್ತೆ ಮೆರೆಯುತಲಿರುವ
ರಘುವರರ ವಸತಿಯೊಳು ವಾಸಗೈದು
ದೇವೇಂದ್ರ ಭೋಗವನು ಕೌಬೇರನೈಸಿರಿಯ—
ನೆಳಸದಂತಿರ್ದನಾ ಮೈಥಿಲೇಯ.

೪೩

ಮುತ್ತಿನಂಬರದಿಂದೆ ಮಣಿಯ ಹಾರಗಳಿಂದೆ
ಸುಯ್ಗಲಗುವಂಶುಕಗಳುಡೆಗಳಿಂದೆ
ನಾಯಕಿಯ ವೇಷವನು ಕುಶನಿಗುಪದೇಶಿಪೊಲು
ಗ್ರೀಷ್ಮಋತು ಸಂಪ್ರಾಪ್ತಮಾದುದಂದು.

೪೪

ಭಾಸ್ಕರನಗಸ್ತ್ಯಚಿಹ್ನಾಯನವನುಳಿದಂದು
ಹತ್ತೆ ಬರಲುತ್ತರದಿಶಾವನಿತೆ ನಲಿದು
ಆನಂದಶೀತಲದ ಬಾಷ್ಪವನು ಕರೆವವೊಲು
ಹಿಮವಾರಿ ತುಹಿನಗಿರಿಯಿಂದಿಳಿದುದು.

೪೫

ಘನತಾಪಕೆಡೆಯೆನಿಸಿ ಸುಟ್ಟುರಿವ ನಿಡುಹಗಲು
ಸೊರಗಿ ಕೃಶತೆಯನಾಂತ ಮತ್ತಿನಿರುಳು
ಗ್ರೀಷ್ಮದೊಳು ತೋರುತಿವೆ ಪ್ರಣಯ ಕಲಹದೊಳಳಲು
ಮಿಗೆ ಪೆರ್ಚೆ ನವೆವ ದಂಪತಿಗಳೋಲು.

೪೬

ಹಾವಸೆಯನುಳಿದುಳಿದು ಮೆಟ್ಟಿಲುಗಳಿಳಿದಿಳಿದು
ಬತ್ತಿದುದು ದಿನದಿನಕೆ ಕೊಳದ ನೀರು
ಕೊನೆಕೊನೆಗೆ ಹೆಂಗುಸಿನ ಪೊರವಾರಿನೆತ್ತರಕೆ
ಮೇಲೆದ್ದ ತಾವರೆಯು ಜಲ ನಿಂತುದು.

೪೭

ಉಪವನಾಂತದೊಳಲ್ಲಿ ಮಲ್ಲಿಗೆಯ ಮೊಗ್ಗುಗಳು
ಸಂಜೆಯೊಳು ಅರಳಿ ಘಮಘಮಿಸುವಂದು
ಒಂದೊಂದು ಹೂವಿನೊಳು ಕುಳಿತು ಆಳಿ ಮೊರೆಮೊರೆದು
ಹೂವುಗಳನೆಣಿಸುವೊಲು ತೋರುತಿಹುದು.

೪೮

ಹೊಸ ಉಗುರು ಕಲೆ ಮೆರೆವ ಬೆವರಿದ ಕಪೋಲದೊಳು
ಕೇಸರಗಳೊಂದೊಂದುಮಂಟಿದಂದು
ಕಿವಿಯಿಂದೆ ಜಗುಳಿದರು ನವಶಿರೀಷದ ಸುಮವು
ನೆಲಕೆ ತಟ್ಟನೆ ಉರುಳಿ ಬೀಳದಿಹುದು.

೪೯

ಜಲಯಂತ್ರಧಾರೆಗಳಿನುಗುವ ಚಂದನ ರಸದೆ
ತೊಯ್ದು ಶೀತಲ ಶಿಲಾತಲದೊಳಂದು
ಪವಳಿಸುತ ಬೇಸಗೆಯ ಬೇಗೆಯನು ಕಳೆದಪರು
ತಂಪಿಗೆಳಸಿದ ಜನರು ಹಣವಂತರು.

೫೦

ಬಿಚ್ಚಿ ಮುಡಿಯನು ಮಿಂದು ಧೂಪಧೂಮಕೆ ತೆರೆದು
ಸಂಜೆಮಲ್ಲಿಗೆ ಮುಡಿದು ಪೆಣ್ಗಳಿರಲು
ಮಧುಮಾಸದಂತ್ಯದೊಳು ಬಲಗುಂದಿದಂಗಜನು
ವನಿತೆಯರ ಕುರುಳಿನೊಳು ಬಲಗೊಂಡನು.

೫೧

ಕುಸುಮರೇಣುವಿನಿಂದಲೀಷದರುಣತೆ ತಳೆದು
ಅರ್ಜುನಕುಜೋದಾರಗುಚ್ಛವಿಹುದು
ಗಿರಿಶನು ಮನೋಭವನ ತನುವನುರುಹಿಯುಮಿರದೆ
ಸಿಟ್ಟಿನೊಳು ಹರಿದೊಗೆದ ಮೌರ್ವಿ ತೆರದೆ.

೫೨

ಮಾಂದಳಿರ ಕಂಪೆರೆದು ಹಳೆಯ ಕಳ್ಳನು ಸುರಿದು
ಪಾದರಿಯ ಪೊಸಪೂವಿನಿಂಪುತಂದು
ಬೇಸಗೆಯ ಕಾಲದೊಳು ಕಾಮಿಗಳ ದೋಷವನು
ಪರಿಹರಿಸಲೆಳಸಿದನು ಚೈತ್ರನೃಪನು.

೫೩

ಆ ಕಠಿನ ಸಮಯದೊಳು ಜನಕೆ ಪರಮಪ್ರಿಯರು
ಅಂದು ಆ ಇರ್ವರೆಯೆ ತಾಮಾದರು
ಪಾದಸೇವಾರತರ ತಾಪವನು ಕಳೆವವರು
ಉದಯಸ್ಥ ಭೂನಾಥ ಉಡುನಾಥರು.

೫೪

ಊರ್ಮಿಮಾಲಾಲೋಲಮದಹಂಸಕುಲಮೆಸೆವ
ತಟಲತಾಕುಸುಮಗಳಿನೊಪ್ಪುತಿರುವ
ಗ್ರೀಷ್ಮಸುಖಕರಮೆನುವ ಸರಯುವೊಳೆಳಸಿದನು
ಜಲಕೇಳಿಗಿನಿಯೆಯರ ಬೆರಸರಸನು.

೫೫

ಜಾಲಿಕರು ಮಡುವಿಂದೆ ಮೊಸಳೆಗಳ ಹೊರದೆಗೆಯೆ
ಪಟಗೃಹಗಳಾನದಿಯ ದಡದೊಳೆಸೆಯೆ
ನಿಜವೈಭವಾನುಗುಣವೆನಿಪೊಂದು ಕೇಳಿಯನು
ತೊಡಗಿದನು ಚಕ್ರಧರನಿಭಮಹಿಮನು.

೫೬

ಅತೀರಸೋಪಾನಮಾರ್ಗಾವತಾರದೊಳು
ಅನ್ಯೋನ್ಯಕೇಯೂರ ಘರ್ಷಣದೊಳು
ರಮಣಿಯರ ಪದಹತಿಯ ನೂಪುರಕ್ಷೋಭೆಯೊಳು
ಬೆದರಿದವು ಸರಯುವಿನ ಹಂಸಂಗಳು.

೫೭

ಒಬ್ಬರೊಬ್ಬರ ಮೊಗಕೆ ನೀರೆರಚುವಂಗನೆಯ-
ರಂದವನು ಆಸ್ತಿಯಿಂದೀಕ್ಷಿಸಿದನು
ಚಾಮರವನಿಕ್ಕುತಿಹ ಪಕ್ಕದ ಕಿರಾತಿನಿಯ
ನುಡಿಸಿದನು ದೋಣಿಯೊಳು ಕುಳಿತು ಕುಶನು.

೫೮

ನೋಡೆಲೆ ಪುಳಿಂದಿನಿಯೆ ಸರಯೂಪ್ರವಾಹವಿದು
ನನ್ನಂತವುರದವರು ಮೀಯುವಂದು
ಗಳಿತಾಂಗರಾಗದಿಂದಖಿಳವರ್ಣಮನಾಂತು
ಸಾಭ್ರಸಂಧ್ಯೋದಯದೊಲೆಸೆವುದಿಂತು.

೫೯

ಅವರೋಧಸುಂದರಿಯರಂಜನವ ಕೊಂಡುದಕೆ
ನೌಲುಲಿತಸರಯುವಿನ ವೀಚಿಮಾಲೆ
ಮದರಾಗಶೋಭೆಯನು ಸತಿಯರ ವಿಲೋಚನಕೆ
ಮಾರಿತ್ತುದೆನೆ ಮೆರೆಯುತಿಹುದು ಲೀಲೆ.

೬೦

ಗುರುಜಘನಕುಚಗಳಿಂದವರೋಧದಬಲೆಯರು
ಭಾರವನು ಹೊರಲಾರದಳಲುವವರು
ಕೇಯೂರಲಸಿತನಿಜಬಾಹಗಳಿನೀಸುವರು
ಅತಿಯತ್ನದಿಂದೆಂತೊ ರಾಗವಶರು.

೬೧

ನೀರಾಟಕೆಳಸಿರುವ ನಾರಿಜನರುಲ್ಲೋಲ—
ದೀಶಿರೀಷಪ್ರಸವದವತಂಸವು
ಜಾರಿ ನೀರೊಳು ತೇಲುತೈತರಲು ಶೈವಾಲ
ಲೋಲಮೀನಂಗಳಹ ಮರುಳಪ್ಪವು.

೬೨

ನೀರೆರಚುವಾಟದೊಳು ಆಸಕ್ತರಾದವರು
ತಮ್ಮ ಮುತ್ತಿನ ಹಾರ ಹರಿದಿದ್ದರು
ಮೊಲೆಯ ಮೇಲುದುರುತಿಹ ಮುತ್ತುಗಳ ತೆರನಿರುವ
ತುಂತುರೊಳು ತಾವದನು ಅರಿಯದಿಹರು.

೬೩

ಒದಗಿರ್ಪುದಬಲೆಯರಿಗಿದೊ ಬಳಿಯೆ ಸರಯುವೊಳು
ಲಲಿತಾವಯವಗಳುಪಮಾನಂಗಳು
ಕುಚವನೆಣೆವಕ್ಕಿಯನು ಕುಡಿವುರ್ವನಲೆಗಳನು
ಸುಳಿಯನು ಸುನಾಭಿಯನು ನೋಡು ನೀನು.

೬೪

ದಡಗಳಲಿ ಗರಿಗೆದರಿ ಕುಣಿಯುವ ಮಯೂರಗಳು
ಜೇನ್ದನಿಯ ಕೇಕೆಯೊಳು ಹೊಗಳುತಿರಲು
ರಮಣಿಯರ ಸವಿಯುಲಿಯ ಹಾಡಿನೊಳು ತಳ್ತೊಗೆದು.
ನೀರ ಮದ್ದಳೆಯ ದನಿ ಕಿವಿವುಗುವುದು.

೬೫

ಸಂದಪ್ಪವಸ್ತ್ರದೊಳು ಸತಿಯರ ನಿತಂಬದೊಳು
ಜೊನ್ನದೊಳು ಮುಳುಗಿರುವ ತಾರೆಗಳೊಲು
ನೀರಿನೊಳಗದ್ದಿರುವ ರಶನಾಕಲಾಪಗಳು
ಮೌನವನು ತಳೆದಿಹವು ಸದ್ದು ನಿಲಲು.

೬೬

ಬೇಗಿ ಸಖಿಯರ ಮೊಗಕೆ ಬೊಗಸೆ ನೀರೆರಚುವರು
ಅವರುಮಿವರಾನನಕ್ಕೆರಚಿದಪರು
ಚೂರ್ಣಾರುಣಾಂಬುಕಣಜಾಲವನು ತರುಣಿಯರು
ಸರಲಾಲಕಾಗ್ರದಿಂದಿಳಿಯಿಸುವರು.

೬೭

ಮುಡಿ ಕೆದರಿ ಬಿಚ್ಚಿಹುದು ಪವುಸೆಲತೆಯಳಿಸಿಹುದು
ಕಿವಿಯ ಮುತ್ತಿನ ಓಲೆ ಸಡಿಲಿರುವುದು
ನೀರಾಟದಾಯಸಕೆ ತುತ್ತಾದರೇನಿಂತು
ಮೊಗದಂದಮೆಸೆದಪುದು ಚೆಲುವನಾಂತು.

೬೮

ತೊನೆವ ಮಾಲೆಯ ಕುಶನು ದೋಣಿಯಿಂದೊಡನಿಳಿದು
ಪೆಣ್ಗಳೊಡನಾಡಿದನು ನೀರೊಳಂತೆ
ತಾವರೆಯ ಬಳ್ಳಿಯನು ಕೊರಳ ಮಾಲೆಯ ಗೈದು
ಕಾಡಾನೆ ಪಿಡಿಗಳೊಡನಾಡುವಂತೆ.

೬೯

ಭ್ರಾಜಿಷ್ಣುವಾನ್ನೃಪನು ಬೆರೆಯಲಂದಬಲೆಯರು
ಸಾತಿಶಯಕಾಂತಿಯಿಂದೆಸೆದಿರ್ದರು
ಮೊದಲೆ ಮುಕ್ತಾಹಾರ ನಯನಾಭಿರಾಮವದು
ಹೊಳೆವ ನೀಲಂವೆರೆಯಲೇವೇಳ್ವುದು.

೭೦

ಕನಕಮಯ ಜೀರ್ಕೊಳವಿಯಿಂದಾಯತಾಕ್ಷಿಯರು
ಬಣ್ಣಬಣ್ಣದ ನೀರನೊಲಿದು ತಂದು
ಕುಶನ ಮೇಲೆರಚಿದರು ತೊಳಗಿರ್ದನವನಿಪನು
ಧಾತುನಿಷ್ಯಂದಗಿರಿರಾಜನಂತೆ.

೭೧

ಸರಯೂತರಂಗಿಣಿಯೊಳವರೋಧತರುಣಿಯರು
ಬೆರಸಿಬರೆ ಜಲಕೇಳಿಯಾಡಿದವನು
ಅಪ್ಸರಾವೃತನೆನಿಸುತಾಕಾಶಗಂಗೆಯೊಳು
ಕ್ರೀಡಿಸುವ ದೇವೇಂದ್ರನಂತಿರ್ದನು.

೭೨

ರಾಜ್ಯವನು ಕುಡುವಂದು ಕುಂಭಜನಿನಾಂತುದನು
ರಾಮನೊಲಿದಾವುದನು ಕುಶಗಿತ್ತನು
ಜೈತ್ರಭೂಷಣವೆನುವ ಆ ತೊಡವು ನೀರಿನೊಳು
ಜಾರಿದುದು ಕುಶನಿಗರಿವಿಲ್ಲದವೊಲು.

೭೩

ಮನವೆಳಸಿದಂದದೊಳು ವನಿತೆಯರನೊಡವೆರೆದು
ನೀರಾಟದೊಳು ಕುಶನು ನಲಿದು ಮಿಂದು
ಪಟನಿಲಯಕೈತಂದು ಬಟ್ಟೆಗಳ ತೊಡುವಂದು
ನೋಡಿದನು ಬಳೆಯಿರದ ಬರಿದೋಳನು.

೭೪

ತಂದೆ ಧರಿಸಿರ್ದುದನು ಜಯವಶೀಕರಣವನು
ಕಳೆದುಕೊಂಡೆನೆ ಎಂದು ನೊಂದನವನು
ಲೋಭವಶದಿಂದರಸು ಅಳಲಿದನೆ ತಾಂ ಬರಿದೆ
ಹೂವೇನು ತೊಡವೇನು ಬುಧನಿಗೊಂದೆ.

೭೫

ಈಸುವುದನರಿತಿರುವ ಚದುರ ಬೆಸ್ತರಿಗಂದು
ಬೆಸಸಿದನು ಭರದೊಳದನರಸಲೆಂದು
ಸರಯುವೊಳು ಮುಳುಗಿದರು ಮರಳಿದಡಕೈದಿದರು
ನಿಷ್ಫಲಪರಿಶ್ರಮರು ನೃಪಗೆಂದರು.

೭೬

ಹೇ ದೇವ ನೀರಿನೊಳು ನಾವೆನಿತೊ ಹುಡುಕಿದೆವು
ಕಂಡುದಿಲ್ಲಾ ತಮ್ಮ ಹಿರಿಯತೊಡವು
ಮಡುವಿನಾಳದೊಳಿರುವ ಕುಮುದನಾಮದಿನೆಸೆವ
ನಾಗನಾಶೆಯಿನದನು ಕೊಂಡನಹುದು.

೭೭

ಬಳಿಕಾಧನುರ್ಧರನು ಕೋಪಾರುಣಾಂಬಕನು
ಆತೀರದೆಡೆಗೈದಿ ಬಲವಾನನು
ಉರಗವನು ಕೊಲಲೆಂದು ಬಿಲ್ಲನೇರಿಸಿನಿಂದು
ಗಾರುಡಾಸ್ತ್ರವ ಭರದಿನೆಳೆದನೊಂದು.

೭೮

ತೊಡುವುದೆ ತಡಂ ಕಣೆಯುನಾಮಡುವು ರಭಸದೊಳು
ತೆರೆಗೈಗಳಂ ಬಡಿದು ಕದಡೆದ್ದುದು
ಕೊಳ್ಳದೊಳು ಬಿದ್ದೊಂದು ಕಾಡಾನೆಯುಂದದೊಳು
ಪರುಷರವಮುಂಗೆಯ್ದು ಭೋರ್ಗರೆದುದು.

೭೯

ಮಥಿಸಿದಂಬುಧಿಯಿಂದೆ ಲಕ್ಷ್ಮಿಯಿಂದೊಡವೆರೆದು
ಸುರರಾಜತರುವು ಮೇಲೇಳುವಂತೆ
ಕ್ಷುಭಿತನಕ್ರಾಕರದೆ ಕೊಡಗೂಸನೊಡವೆರೆದು
ಒಡನೆ ಭುಜಗೇಂದ್ರನೈತಂದನತ್ತ.

೮೦

ಮರಳಿ ತನಗೀಯಲೆಂದಾಭರಣವನು ಪಿಡಿದು
ಕರಮುಗಿದು ಬಂದುದನು ನೋಡಿದಂದು
ವರಸುಪರ್ಣಾಸ್ತ್ರವನು ಮರಳಿಸಿದನಾ ನೃಪನು
ಆನತರೊಳವನನಿರ್ಭಂಥರುಷನು.

೮೧

ಮಾನದಿಂದೆತ್ತಿರುವ ತಲೆಯನಿನಿಸಾನಿಸುತ
 ತ್ರೈಲೋಕ್ಯನಾಥನ ಕುಮಾರಕನನು
ಅಸ್ತ್ರವಿದನುಸುರಿದನು ಮೂರ್ಧಾಭಿಷಿಕ್ತನನು
 ವೈರಿಕುಲದಂಕುಶನನಾಕುಶನನು.

೮೨

ಸುರಕಾರ್ಯಕೈತಂದು ನರರೂಪವನು ತಳೆದು
 ವಿಷ್ಣುವಿನ ಲೀಲೆಯಿದು ಬೇರೆಯೊಂದು
ಮಗನೆನುವರೂಪಿದೆಂದರಿತಿರ್ದುಮೆಂತಾನು
 ಪೂಜ್ಯ ನಿನ್ನಳ್ತಿಗೆಡರೊಡ್ಡಿದಪೆನು !

೮೩

ಕೈಚೆಂಡಿನಾಟಕೆಂದೆತ್ತರಕೆ ಹೊಡೆದಿವಳು
 ಮೊಗವೆತ್ತಿ ಚೆಂಡನೆಯೆ ನೋಡುತಿರಲು
ನಿನ್ನ ಜೈತ್ರಾಭರಣ ನಕ್ಷತ್ರದಂದದೊಳು
 ಬೀಳ್ವುದನು ಕೌತುಕದಿ ಕಂಡಾಂತಳು.

೮೪

ಇಳೆಯ ಕಾಪಿಡಲಿರುವ ಪೇರಗುಳಿಯಂತಿರುವ
 ಮೊಳಕಾಲವರೆಗಿಳಿದು ನೀಳಮಿರುವ
ಹೆದೆಯ ಬಿರುಗಾಯದಿಂದೊಗೆದ ಜಡ್ಡುಗಳಿರುವ
 ನಿನ್ನ ಭುಜ ತಳೆಯಲಿಂದೀ ವಲಯುವ.

೮೫

ತವಚರಣಸೇವೆಯಿಂದಾತ್ಮಾಪರಾಧವನು
 ಕಳೆದುಕೊಳಲೆಂದಿವಳು ಬಯಸಿರುವಳು
ಈ ಕುಮುದ್ವತಿಯನೆನ್ನಕ್ಕರೆಯ ತಂಗಿಯನು
 ಪಾರ್ಥಿವನೆ ನೀನಿಂದು ಒಪ್ಪಿಸಿಕೊಳು.

೮೬

ಪೇಳುತಲಿಂತಾಕುಮುದನು ಕೊಟ್ಟನು ದಿವ್ಯಾಭರಣವನು
ನಂಟನು ಮಾನ್ಯನು ನೀನೆಂದವನನು ಪೊಗಳಿದನವನಿಪನು
ಕನ್ಯಾರೂಪದ ತೊಡವನು ಕುಲಭೂಷಣೆಯನು ಕುಮುದನು ಸಲೆ ನಲಿದು
ಅವನಿಪಗಿತ್ತನು ಬಂಧುಸಮೇತನು ವಿಧಿಪೂರ್ವಕವೆನೆ ತಾನಂದು.

೮೭

ಮಾಂಗಲ್ಯೋರ್ಣದ ವಲಯದಿನೆಸೆಯುವ ಕುಮುದನ ತಂಗಿಯ ಕೈಗಳನು
ಜ್ವಾಲೆಯನೆಸೆಯುವ ಪಾವಕನೆದುರೊಳು ಸಹಚರ್ಯಕೆ ಪಿಡಿದಿರೆ ಕುಶನು
ದಿಕ್ಕಿನ ಕೊನೆಯನು ಕವಿಯುವ ಅಮರರ ತೂರ್ಯಸ್ವರ ತಾಂ ಪೊಣ್ಮಿದುದು
ಅಚ್ಚರಿ ಮುಗಿಲುಗಳಮಳಸುಗಂಧದ ಪೂಮಳೆಯನು ಸಲೆ ಸುರಿಸಿದುದು.

೮೮

ಇಂತಾನಾಗನು ತ್ರಿಭುವನ ಗುರುವಿನ ಔರಸಪುತ್ರನ ಬಂಧುತ್ವಕೆ ಸಂದು
ಕುಶನುಂ ತಕ್ಷಕನೈದನೆ ಮಗನನು ಕುಮುದೋರಗನನು ಬಾಂಧವ್ಯದೆ ಪಡೆದು
ತಂದೆಯ ವಧಿಸಿದ ರಿಪುಗರುಡನ ಭಯತೊರೆದಂದೊರ್ವನು ಸುಖಿಸಿದನು
ಸರ್ಪನ ಭಯವಿರದಿಳೆಯನದೊರ್ವನು ಜನಮನರಂಜಕನಾಳಿದನು.

## ಹದಿನೇಳನೆಯ ಸರ್ಗ

# ಅತಿಥಿರಾಜ್ಯಭಾರ

೧

ಕಾಕುತ್‌ಸ್ಥನಾತನಿಂದಾಕುಮುದ್ವತಿ ಪಡೆದಳತಿಥಿಯೆನುವಾತ್ಮಜನನಲ್ತೆ
ಯಾಮಿನಿಯ ಆ ಕಡೆಯ ಯಾಮದೊಳು ಚೇತನವು ಸುಪ್ರಸನ್ನತೆಯ
ಪಡೆವಂತೆ.

೨

ತಾಯ್ತಂದೆಯರ ಕುಲನುನನುಸಮುದ್ಯುತಿಯುತನು ಪಿತೃವುಂತನಮಲ
ಗೊಳಿಸಿದನು
ದಕ್ಷಿಣೋತ್ತರಮಾರ್ಗಗಳನಮುಳಗೊಳಿಸುವ್ರೊಲು ಹೊಳೆಹೊಳೆವ ಸವಿತಾ
ರನವನು.

೩

ಮೊದಲು ಕುಲವಿದ್ಯೆಗಳ ಕಲಿಸುತರ್ಥಗ್ರಹಣಗೈಸಿದನು ಅರ್ಥವಿದ್ವರನು
ಬಳಿಕ ಪಾರ್ಥಿವಕನ್ಯೆಯರ ಕರಗ್ರಹಣಮುಂ ಗೈಸಿದನು ಆ ಅತಿಥಿಪಿತನು.

೪

ಶೂರನು ಕುಲೀನನು ಕುಶಾಧಿಪನು ವಶಿ ತನ್ನನೆಣಿಸಿದನನೇಕನೆಂದಂದು
ಶೂರನು ಕುಲೀನನು ಮಹೋನ್ನತನು ವಶಿ ಅತಿಥಿಸುತನಿಂದಲಂದು.

೫

ಅನ್ವಯೋಚಿತಸಹಾಯವನು ತಾನಮರಾಧಿಪಂಗೀಯಲೆಂದೈದಿದವನು
ಸಮರದೊಳು ದೈತ್ಯನನು ದುರ್ಜಯಾಖ್ಯನನಳಿದು ತಾನುಮವನಿಂದಳಿದ
ನಂದು.

೬

ಪತಿಯನನುಸರಿಸಿದಳು ಸತಿಕುಮುದ್ವತಿ ನಾಗರಾಜನಾದಾಕುಮುದನನುಜೆ
ಕುಮುದದಾನಂದನನು ಆ ಶಶಾಂಕನನು ಇರದನುಸರಿಪ ಕೌಮುದಿಯ ತೆರದೆ

೭

ಆ ದಿವಸ್ಪತಿಯ ಸಿಂಹಾಸನಾರ್ಧಕ್ಕವರೊಳೊರ್ವನಿರಲರ್ಹನೆಂದೆನಿಸಿ
ಪಾರಿಜಾತಾಂಶಭಾಗಿನಿಯಾದಳುಳಿದ ಮತ್ತೊರ್ವಳಾಶಚಿಯು ಸಖಿಯೆನಿಸಿ.

೮

ಯುದ್ಧಕೆಂದೈದುವಂದವರೊಡೆಯ ಕುಶನೃಪನು ಅವರಿಗಿತ್ತಾಣತಿಯ
ನೆನೆದು.
ವೃದ್ಧಸಚಿವರ್ಕಳೊಡನಾ ಆತ್ಮಸಂಭವನನಿರಿಸಿದರು ರಾಜ್ಯದೊಳು ನಲಿದು.

೯

ಅಭಿನವೋನ್ನತವೇದಿಯಿಂದೆಸೆವ ನಾಲ್ಕುಕಂಬಂಗಳ ವಿಮಾನವನು ಅವರು.
ಕುಶಲಕೋವಿದರಪ್ಪ ಶಿಲ್ಪಿಗಳಿನತಿಥಿಯಭಿಷೇಕಕೆಂದಣಿಮಾಡಿಸಿದರು.

೧೦

ಅಲ್ಲಿ ಆ ಭದ್ರಪೀಠದಮೇಲೆ ತಾವೆಲ್ಲರತಿಥಿಯನು ಕುಳ್ಳಿರಿಸುತಂದು
ಸೇರಿದರು ತೀರ್ಥಾಂಬುಪೂರ್ಣವರಹೇಮಕುಂಭಂಗಳನು ಸಲೆ ಹೊತ್ತು
ತಂದು.

೧೧

ಮುಂದವಿಚ್ಛಿನ್ನಕಲ್ಯಾಣದ ಪರಂಪರೆಯನಿವನನುಭವಿಪನತಿಥಿಯೆಂದು
ಸೂಚಿಸಿದುದಾಹತಸುಪುಷ್ಕರಮುಖೋದ್ಭೂತ ಮಧುರಗಂಭೀರರವಮಂದು.

೧೨

ಚಿಗುರಿನಿಂದಾಲದೆಳೆತೊಗಟೆಯಿಂದಾಯವಾಂಕುರದಿಂದೆ ಮೇಣ್ ದೂರ್ವೆ
ಯಿಂದೆ.
ಜ್ಞಾತಿವೃದ್ಧರ್ಕಳಂದಣಿಗೈದ ನೀರಾಜನವಕೊಂಡನವನರ್ತಿಯಿಂದೆ.

೧೩

ಬಳಿಕಮಭಿಷೇಕಮನುಪಕ್ರಮಿಸಲಿರ್ದರು ಪುರೋಹಿತಪ್ರಮುಖಭೂಸುರರು.
ಜಿಷ್ಣುವಾದತಿಥಿಯನು ಜಯವ ತಂದೀಯುವ ಅಥರ್ವಮಂತ್ರಂಗಳಿಂ
ದವರು.

೧೪

ಮಂತ್ರಶಬ್ದಂಬೆರೆದು ಮೂರ್ಧ್ನಿಯಿಂದಿಳಿದುಬರುವಭಿಷೇಕದೋಘ ತಾನೆಸೆದು
ತ್ರಿಪುರವಿಧ್ವಂಸಕನ ಮೂರ್ಧ್ನಿಯಿಂದಿಳಿದುಬಹ ಗಂಗೆಗೆಣೆಯಾಗಿರ್ದು ದಂದು.

೧೫

ವಂದಿಜನಸಂಸ್ತುತ್ಯನಾದತಿಥಿ ತಾಂ ವರ್ಧಿತಾನಂದದಿಂದೆಸೆದನಲ್ತೆ
ಸಾರಂಗವೃಂದದಿಂದಭಿವಂದ್ಯನಾಗಿರ್ದ ಪರ್ಜನ್ಯನೆಂತೆಸೆವನಂತೆ.

೧೬

ಪೆರ್ಚಿದುದು ಸನ್ಮಂತ್ರಪೂತತೋಯಂಗಳಿಂದಭಿಷಿಕ್ತನಾದವನ ಕಾಂತಿ
ವೃಷ್ಟಿಸೇಕೋತ್ಕರದೊಳಾವೈದ್ಯುತಾಗ್ನಿ ತಾಂ ಪೆರ್ಚುವೋಲ್ ಪೊಸಪೊ ಗರನಾಂತು.

೧೭

ಸ್ನಾತಕರಿಗತಿಥಿನರಪತಿಯಿತ್ತನಾಪಟ್ಟದಭಿಷೇಕದಂತ್ಯದೊಳು ನಲಿದು
ಅವರೊಡರ್ಚುವ ದಕ್ಷಿಣೋಪೇತಯಜ್ಞಗಳಿಗಾಗುವನಿತ್ತೈಸಿರಿಯನಂದು.

೧೮

ಪ್ರೀತಿಮಾನಸರವರು ಹರಕೆಯನದಾವುದಂ ಪ್ರಕಟಿಸಿದರಾತನಂ ಕುರಿತು
ಪೂರ್ವಪುಣ್ಯೋತ್ಪನ್ನ ಕರ್ಮಫಲದಿಂದಲದು ಮೀಸಲಾಗಿಡೆಪಟ್ಟುದಂತು.

೧೯

ಬಂಧದಿಂ ಬಿಡಿಸಿದನು ಬದ್ಧರನು ಸಾವಿನಿಂದುಳುಹಿದನು ವಧ್ಯರನು ಅವನು
ನಿಲಿಸಿದನು ಗೋದೋಹನಂಗಳನು ಮೇಣಂತೆ ತೆಗಿಸಿದನು ಪಶುಧುರಂ ಗಳನು.

೨೦

ಪಂಜರದ ಆ ಗಿಣಿಯೆ ಮೊದಲಾದ ನೃಪವರನ ಆಟದೊಳ್ವಕ್ಕಿಗಳುಮಂದು
ಅರಸನಾಣತಿಯಿಂದೆ ಬಿಡುಗಡೆಯ ಪಡೆದು ಹಾರಾಡಿದವು ಸ್ವೇಚ್ಛೆಯಿಂ ದೊಲಿದು.

೨೧

ಬಳಿಕ ಕಕ್ಷ್ಯಾಂತರನ್ಯಸ್ತಶುದ್ಧೇಭದಂತಾಸನದೊಳಾಸ್ತರಣಮಧ್ಯೆ
ನೇಪಥ್ಯಸಂಗ್ರಹಣಕೆಂದಲ್ಲಿ ಮಂಡಿಸಿದನತಿಥಿಭೂಪೋತ್ತಮನು ಭರದೆ.

೨೨

ಸದ್ಧೂಪಶೋಷಿತಕಚಾಗ್ರನನು ತೋಯನಿರ್ಣಿಕ್ತಹಸ್ತರ್ಕಳೈತಂದು
ಆಕಲ್ಪಸಾಧನಗಳಿಂದಲಂಕರ್ತೃಗಳು ಸಿಂಗರಿಸತೊಡಗಿರ್ದರಂದು.

೨೩

ಪುಷ್ಪಮಾಲಾಯುಕ್ತ ಮುಕ್ತಾಗುಣೋನ್ನದ್ಧ ನೃಪತಿಧಮ್ಮಿಲ್ಲದೊಳವರ್ಗಳ್
ಹೊಳೆಹೊಳೆವ ಸುಪ್ರಭಾಮಂಡಲದ ಮಾಣಿಕ್ಯಭೂಷಣವನಿರಿಸಿರ್ದರಾಗಳ್

೨೪

ಮೃಗನಾಭಿಸೌಗಂಧದೊಡವೆರೆದ ಚಂದನದ ಶುಭದಂಗರಾಗವನು ತೊಡೆದು
ಬಳಿಕ ತಾಂ ರೋಚನದ ಪತ್ರವಿರಚನೆಗಳನು ಮೂಡಿಸಿದರಾನೃಪನೊಳಂದು.

೨೫

ಮಾಣಿಕ್ಯಭೂಷಣನು ಪುಷ್ಪಹಾರಾನ್ವಿತನು ಹಂಸಚಿಹ್ನಾಂಬರನು ನೃಪನು
ಶೋಭಿಸಿದನತಿಥಿಯಂದತಿಶಯಪ್ರೇಕ್ಷ್ಯನಾರಾಜ್ಯಲಕ್ಷ್ಮೀವಧೂವರನು.

೨೬

ತನ್ನಲಂಕಾರವನು ಕನಕಮಯದರ್ಪಣದೊಳೀಕ್ಷಿಪಂದವನ ಪಡಿನೆಳಲು
ಕಾಣಿಸಿತ್ತಿನಬಿಂಬದುದಯದೊಳು ಮೇರುಗಿರಿಮಧ್ಯದಾಕಲ್ಪತರುವೋಲು.

೨೭

ರಾಜಕಕುದಂಬಿಡಿದ ಪಾರ್ಶ್ವವರ್ತಿಗಳಂದು ನಡೆಯೆ ಜಯಕಾರಮಂಗೈದು
ದೇವಸಭೆಗೇನೂನಮಿಲ್ಲದೊಡ್ಡೋಲಗಕೆ ಸಡಗರದೊಳತಿಥಿಯೈತಂದು.

೨೮

ನೃಪಶಿರೋರತ್ನಂಗಳುಜ್ಜಿರುವ ಮಣಿಪಾದಪೀಠದಿಂದುಲ್ಲೋಚದಿಂದೆ
ಮೆರೆವ ಆ ಪೂರ್ವಜರ ಸಿಂಹಪೀಠದೊಳತಿಥಿ ಮಂಡಿಸಿದನತಿಹರ್ಷದಿಂದೆ.

೨೯

ಅತಿಥಿಯಿಂದೊಪ್ಪಿದುದು ಶ್ರೀವತ್ಸನಾಮದ ಮಹೋನ್ನತಶುಭಾವಸಥ
ಮೆಂದು
ಶ್ರೀವತ್ಸಲಾಂಛನದ ಕೌಸ್ತುಭಾಕ್ರಾಂತಮಾದಾಹರಿಯ ವಕ್ಷಕೆಣೆಯೆಂದು.

೩೦

ಬಾಲ್ಯಕಳೆವನಿತರೊಳೆ ಆಧಿರಾಜ್ಯಂಬಡೆದು ಮೆರೆಯುವಾ ಅತಿಥಿನೃಪವರನು
ಬಾಲ್ಯಚಂದ್ರತ್ವವನು ಕಳೆದೊಡನೆ ಪೂರ್ಣತೆಯಿನೆಸೆವಿಂದುಮಂಡಲದೊಲಿಹನು.

೩೧

ಬಗೆದರನುಜೀವಿಜನರಾತನನು ನಂಬುಗೆಯೆ ಮೃತಳಿದ ಪಾಂಗಿದಹುದೆಂದು
ಸೌಮ್ಯಮುಖರಾಗನನು ಸ್ಮಿತಪೂರ್ವಭಾಷಣನನತಿಥಿರಾಜನನು ತಾಮಂದು.

೩೨

ಅಮರೇಂದ್ರನಿಭಮೆನಿಪ್ಪೋಜೆಯೊಂದಾನೆಯೊಳು ಸುರಗತಿಶ್ರೀನಿಭನು ನೃಪನು
ಸುರತರುನಿಭಧ್ವಜದಯೋಧ್ಯೆಯೊಳು ಸಂಚರಿಸುತೆಸಗಿದನು ದಿವಿಯುವೋಲದನು.

೩೩

ಅತಿಥಿಯೊರ್ವನ ತಲೆಯ ಮೇಲೆತ್ತಿ ಹಿಡಿದಿರುವ ಬೆಳ್ಗೊಡೆಯ ಕಾಂತಿ ತಾನಂದು
ಮೊದಲರಸಿನಗಲಿಕೆಯೊಳೊಗೆದ ಜಗದುರವಣೆಯ ಬೇಗೆಯನು ನೀಗಿದುದು ಸಂದು.

೩೪

ಹೊಗೆಯೊಗೆದ ಬಳಿಕಲುರಿಯೊಗೆದಪುದು ನೇಸರೊಗೆದಾಬಳಿಕ ಕದಿರೊಗೆವುದಹುದು
ಅವನು ತದ್ವೃತ್ತಿಯನತಿಕ್ರಮಿಸುತುದಯಿಸಿದನಂದಖಿಲಗುಣಗಣಂಬೆರೆದು.

೩೫

ಪ್ರೀತಿವಿಶದಾಲೋಕನೇತ್ರಿಯರು ಅವನನನುಸರಿಸಿದರು ಪೌರಾಂಗನೆಯರು
ಧ್ರುವನುನನುಸರಿಸುವಂತಾಶರತ್ಫುಲ್ಲನಕ್ಷತ್ರಯುತಯಾಮಿನಿಗಳೊಲಿದು.

೩೬

ಕೈಕೊಳುತ್ತಾ ಪ್ರಶಸ್ತಾಯತನದರ್ಚನೆಯ ಸಾಕೇತದೇವತೆಗಳಂದು
ತದನುಗ್ರಹಾರ್ಹನನು ವಿಗ್ರಹದೊಳವತರಿಸುತೊಲಿದನುಗ್ರಹಿಸಿದರು ಬಂದು.

೩೭

ಅಭಿಷೇಕಜಲಸಕ್ತಮಾದ ಆ ವೇದಿ ತಾನೊಣಗಿತೆನುವನಿತರೊಳಗಿತ್ತ
ತಡೆಯಲಸದಳವೆನಿಸಿದವನಾಪುರ್ಣ ವೇಲಾಂಬರಂಬಿಡದೆ ಪರಿದಿರ್ದುದತ್ತ.

೩೮

ವಾಸಿಷ್ಠಗುರುವಿನಾಲೋಚನೆಗಳಾಧನುರ್ಧರನ ನಾರಾಚಗಳ್ ಸರಿಯೆ
ಇಂತಿರ್ವರುಂ ಬೆರೆಯಲೇವೇಳ್ವೆನಾವುದಿದೆ ಸಾಧಿಸಲ್ಕರಿದಪ್ಪುದರಿಯೆ.

೩೯

ತಾನೆ ಪರಿಹರಿಸಲೆಂದಾಲಿಪನು ಆ ಅತಂದ್ರಿತನತಿಥಿ ಧರ್ಮಸ್ಥಸಖನು
ಅರ್ಥಿಪ್ರತ್ಯರ್ಥಿಗಳ ಸಂಶಯಚ್ಛೇದ್ಯವಾದಂಗಳನು ವ್ಯವಹಾರಗಳನು.

೪೦

ಇಷ್ಟಾರ್ಥಸಿದ್ಧಿಯನು ಸೂಚಿಸಿರಲಾವ್ಯಕ್ತವಾದಾತ್ಮಸೌಮನಸ್ಯದೊಳು
ತಂತಮ್ಮ ಕೋರಿಕೆಗಳಂ ಪೇಳ್ದು ಫಲಪಡೆವರೊಡನೊಡನೆ ಊಳಿಗದ ಜನರು.

೪೧

ಶ್ರಾವಣದ ನದಿಗಳಂತಾಪ್ರಜೆಗಳಭಿವೃದ್ಧಿ ಪಡೆದವರು ಕುಶನಿಂದಲಂದು
ಭಾದ್ರಪದದಾತೊರೆಗಳಂತಮಿತವೃದ್ಧಿಯನು ಪಡೆದಿರ್ದರತಿಥಿಯಿಂದಿಂದು.

೪೨

ಅವನೇನನೊರೆವನದು ಪುಸಿಯಾಗದೇನನಿತ್ತಪನದನು ಹಿಂದಿರುಗಿ ಕೊಳನು
ಆದರವನರಿಗಳನು ಮುಂದೊಗೆದು ಮರಳಿ ನೆಲೆಗೊಳಿಪಂದು ವ್ರತಗೇಡಿಯಹನು.

೪೩

ಮದಹೇತುವಪ್ಪುದು ವಯೋರೂಪವಿಭವಂಗಳೊಂದೊಂದೆ ಎನಲವನೊಳಂದು
ನೆರೆದಿರ್ದುವಾಗುಣಸಮಸ್ತಮುಂ ವರರಘೂದ್ವಹನೆ ಮನತಾಂ ಕದಡದಿಹುದು.

೪೪

ದಿನದಿನಕೆ ಜನಜನಿತರಾಗದಿಂದಕ್ಷೋಭ್ಯನೆನಿಸಿರ್ಪನಭಿನವನು ನೃಪನು
ಭೂಮಿಯೊಳು ದೃಢಮೂಲಮೆನಿಸಿ ಸಂಜನಿಸಿರ್ದದೊಂದು ನವವೃಕ್ಷದೋಲವನು.

೪೫

ಹೊರಗಿರುವ ಶತ್ರುಗಳನಿತ್ಯರುಂ ಮತ್ತೆ ದೂರಸ್ಥರುಂ ಆದುದರಿನವನು
ಜಯಿಸಿದನು ಮೊಟ್ಟಮೊದಲೊಳಗಿರುವ ನಿತ್ಯರೆನಿಸಿರ್ದಾರು ನಿಜಶತ್ರುಗಳನು.

೪೬

ನಿಜದಿಂದಲಸ್ಥಿರಳು ತಾನಾದೊಡಂ ಲಕ್ಷ್ಮಿ ಆಪ್ರಸಾದಾಭಿಮುಖನೃಪನೊಳ್
ಸುಸ್ಥಿರತೆಯಿಂದಂದು ನಿಕಷದೊಳು ಆ ಹೇಮರೇಖೆಯೆಂತಂತು ನೆಲಸಿರ್ದಳ್.

೪೭

ಆರ್ಪಿರದ ಬರಿಯ ನಯ ಭಯವಹುದು ನಯವಿರದ ಬರಿಯಾರ್ಪು ಪಶುಚೇಷ್ಟೆ
ಯಹುದು
ಅದರಿಂದಲುಭಯಗುಣದನ್ವಯದೊಳಾನೃಪನು ಸಿದ್ಧಿಯನು ಪಡೆಯುತಿಹನಹುದು.

೪೮

ಎಲ್ಲಕಡೆಗಟ್ಟಿರುವ ಚರರ ದೀಧಿತಿಯಿಂದಲವನಿಗಾನಾಡಿನೊಳಗಂದು
ಕಾಣದಿಹುದೊಂದುಮಿಲ್ಲೆಂದಾದುದಭ್ರರಹಿತೋಜ್ವಲವಿವಸ್ವತನವೋಲು.

೪೯

ಪಗಲಿರುಳ್ಗಳ ವಿಭಾಗಂಗಳೊಳು ಅವನಿಪರಿಗಾವುದಾದಿಷ್ಟವಾಗಿಹುದು
ಶ್ರದ್ಧೆಯಿಂದದನವನು ಸಂಶಯಪರಾಙ್ಮುಖನು ಎಡಬಿಡದೆ ನಡಸುತಿಹನಹುದು.

೫೦

ಪ್ರತಿದಿನವು ನಡೆಯಿಪನು ಮಂತ್ರವನು ಮಂತ್ರಿಜನದೊಡನವನು ಅತಿಥಿಭೂವರನು
ಹಲವುಸಲ ನುಡಿದರೂ ಅತಿಗೋಪ್ಯವಾದುದರಿನಾಮಂತ್ರ ಹೊರಬೀಳದಿಹುದು.

೫೧

ಸ್ವಪರಜನಮಧ್ಯದೊಳು ಒಬ್ಬರೊಬ್ಬರನರಿಯದಾಗೂಢಚಾರರನು ಕಳುಹಿ
ಯುಕ್ತಕಾಲದೊಳರಸು ನಿದ್ರೆಗೈದಿರ್ದುಮೆಚ್ಚರದಿಂದಲಿರುತಿಹನು ತಾನು.

೫೨

ದುರ್ಭೇದ್ಯದುರ್ಗಗಳನಾಂತಿಹನು ಶತ್ರುನಿರ್ಭೀತನಾ ಅರಿನಿರೋಧಕನು
ಭೀತಿಯಿಂದಿಹನೇನು ಗಿರಿಗುಹೆಯೊಳಾನೆಗಳ ಕೊಲ್ವದಟನಾಮೃಗಾಧಿಪನು.

೫೩

ಸುವಿಚಾರಯುತಮೆನಿಸುತೆಡರರಿಯದಾನೃಪನ ಮಂಗಳಪ್ರದಸಮಾರಂಭಂ
ಫಲಕಾರಿಯಾದುದು ರಹಸ್ಯದೊಳು ಗರ್ಭದೊಳೆ ಪಣ್ತ ಆ ಶಾಲಿವೋಲನಿಶಂ.

೫೪

ತಾನದೆನಿತೇಳಿಗೆಯನೈದಿದರುಮಡಿಯಿಡನು ಅಪಥದೊಳು ಅತಿಥಿಭೂಮಿಪನು
ತೋಯಧಿ ನದೀಮುಖದೊಳಲ್ಲದಿನ್ನೆನಿತು ಭರ ಬಂದರೂ ಹೊರಸೂಸದಿಹುದು.

೫೫

ಪ್ರಕೃತಿವೈರಾಗ್ಯವನು ತಾಂ ಕ್ಷಣದೊಳುಪಶಮನಗೊಳಿಸುವೊಂದಾರ್ಪವನೊಳಿಹುದು
ಆದರೂ ತಾಂ ಪ್ರತೀಕಾರವನು ಕೈಗೊಳುವ ಕಾರ್ಯಗಳಿಗೆಡೆಗೊಡದೊಲಿಹನು.

೫೬

ಅಧಿಕಬಲನಾದರೂ ಶಕ್ಯರಾದರಿಗಳನೆ ಗೆಲುವುದಕೆ ಯಾತ್ರೆಗೈಯುವನು
ಅನಿಲನ ಸಹಾಯ ತನಗಿದ್ದರೂ ಜಲದಘನಕೆಳಸನು ದವಾನಲನು ತಾನು.

೫೭

ಕಾಮನನು ಅರ್ಥದಿಂದರ್ಥವನು ಕಾಮದಿಂದಿವುಗಳನು ಆ ಧರ್ಮದಿಂದೆ
ಧರ್ಮದಿಂದಿವುಗಳನು ಬಾಧಿಸದೊಲಾನೃಪನು ಮೆರೆಯುವನು ಮೂರರನ್ವಯದೆ.

೫೮

ಉನ್ನತರು ಅರಿಗಳಹರಳಿವೆಸೆಯೊಳಿರುವವರು ಮಾರ್ನೆರವಿಗಸಮರ್ಥರಹರು
ಅದರಿಂದಲಾನೃಪನು ತನ್ನೆಲ್ಲ ಮಿತ್ರರನು ಮಧ್ಯಮಸ್ಥಿತಿಯೊಳಿರಿಸಿಹನು.

೫೯

ತನ್ನ ಮೇಣರಿಗಳ ಪರಾಕ್ರಮ ಬಲಾಬಲಗಳೆಲ್ಲವನು ಪರಿಗಣಿಸುತವನು
ಹಗೆಗಿಂತ ತನ್ನ ಕೈ ಮೇಲೆನಿಸಲೈದುವನು ಅಲ್ಲದಿರೆ ತಾಂ ಸುಮ್ಮನಹನು.

೬೦

ಕೋಶದಿಂದಲ್ತೆ ಭಜನೀಯತ್ವಮಪ್ಪುದೆಂದರ್ಥವನು ಗಳಿಸಿರುವನವನು
ಜಲಗರ್ಭಮಪ್ಪ ಜೀಮೂತನೆಯೆ ಚಾತಕಕುಲಂಗಳಿಂದಭಿನಂದ್ಯನಲ್ತೆ.

೬೧

ಪರರ ಕರ್ಮಂಗಳನು ಕೆಡಿಸುತುದ್ಯುಕ್ತನಾವಪನಾತ್ಮಕರ್ಮದೊಳು ನೃಪನು
ಪರರ ಕೊರೆಗಳ ತಿಳಿದು ಸದೆಬಡಿಯುತಾತ್ಮರಂಧ್ರಂಗಳನು ಮುಚ್ಚಿದಪನವನು.

೬೨

ಜನಕನಿಂದನಿಶಮಭಿವೃದ್ಧಿ ಪಡೆದಸ್ತ್ರಂಗಳಂ ಕಲ್ತು ಧುರಕೆ ತಗುವುದನು
ನಿಜದೇಹದಿಂದನ್ಯವೆಂದೆಣಿಸನಾದಂಡನುರುದಂಡಸಂಪನ್ನನೃಪನು.

೬೩

ಅನ್ಯರಪಹರಿಸದಿಹರವನ ಶಕ್ತಿತ್ರಯವ ಸರ್ಪದ ಶಿರೋರತ್ನದಂತೆ
ಆದರವನನ್ಯರಿಂದದನೆಳೆದುಕೊಂಡಪನು ಸೂಜಿಗಲ್ಲುಕ್ಕನೆಂತಂತೆ.

೬೪

ವನದೊಳುಪವನದಂತೆ ಗಿರಿಯೊಳಾಲಯದಂತೆ ತೊರೆಗಳೊಳು ಪರಿಕಾಲ್ಗಳಂತೆ
ವರ್ತಕರು ಸಂಚಾರವೆಸಗಿದರು ವಾಣಿಜ್ಯಕೆಂದೊಲಿದು ನಿರ್ಭೀತರಂತೆ.

೬೫

ತಪವನೆಡರುಗಳಿಂದಲೈಸಿರಿಯ ಕಳ್ಳರಿಂದಾನೃಪನು ರಕ್ಷಿಸುತೆ ಮುದದೆ
ಧನದ ಮೇಣ್ ತಪದ ಷಡ್ಭಾಗಾರ್ಹನಹನು ವರ್ಣಂಗಳಿಂದಾಶ್ರಮಗಳಿಂದೆ.

೬೬

ಗಣಿಯಿಂದೆ ರತ್ನವನು ಹೊಲದಿಂದೆ ಸಸ್ಯವನು ಕಾಡಿನಿಂದಾನೆಯನು ಪೆತ್ತು
ಸಂರಕ್ಷಣಾನುಗುಣವೇತನವನವನಿ ತಾನವನಿಗಿತ್ತುದು ಮುದಂಬೆತ್ತು.

೬೭

ಅರುವೊಗನ ಆರ್ಪಿನವನಾ ಆರು ಗುಣಗಳನು ಮೇಣಾರು ಬಲಗಳನು ತಳೆದು
ವಸ್ತುಗಳ ಸಾಧಿಪನು ಸಾಧಿಸುವ ವಸ್ತುಗಳಲವುಗಳುಪಯೋಗವನು ತಿಳಿದು.

೬೮

ಪರಿವಿಡಿಯೊಳಾಚತುರ್ವಿಧರಾಜನೀತಿಯನು ತಾಂ ಪ್ರಯೋಗಿಸುತತಿಥಿಯಿಂತು
ಮಂತ್ರಾದ್ಯದಿ ತೀರ್ಥಸಿದ್ಧ್ಯಂಬರಂ ನಡೆಯಿರದೆ ಫಲಗಳನು ಪಡೆದನು ಸಮಂತು.

೬೯

ಕಪಟಯುದ್ಧಪ್ರಕಾರಾಭಿಜ್ಞನತಿಥಿ ಸನ್ಮಾರ್ಗಸಮರಮಂಗೈವನೆಂದು
ವೀರಗಾಮಿನಿ ವಿಜಯಲಕ್ಷ್ಮಿಯಭಿಸಾರಿಕಾವೃತ್ತಿಯನು ತಾಂ ತಳೆದಳಂದು.

೭೦

ಮದಗಂಧಮಾತ್ರದಿಂದನ್ಯದ್ವಿಪಂಗಳನು ಓಡಿಸುವ ಮದಗಜಕದೆಂತು.
ಸಮರದುರ್ಲಭವಾದುದತಿತೇಜದಿಂದರಿಗಳೋಡುತಿರಲವನಿಪನಿಗಂತು

೭೧

ಬೆಳೆಬೆಳೆದು ಉಬ್ಬಿರುವ ಚಂದಿರನು ಕುಗ್ಗುವನು ಕುಗ್ಗುವುದು ಕಡಲುಮುಬ್ಬಿದುದ
ಶಶಿಯಂತೆ ಕಡಲಂತೆ ಅತಿಥಿನೃಪನುಬ್ಬುವನು ಅವರಂತೆ ಕುಗ್ಗದಿಹನಹುದು.

೭೨

ಕಡುಬಡವರಾದಂದು ಬೇಡಲೆಂದವನಬಳಿಗೈತಂದ ಆ ವಿಬುಧಜನರು
ಕಡಲಿನೆಡೆಗೈತಂದ ಮೋಡದೊಲು ತಾವೆ ದಾತೃತ್ವವನು ಪಡೆದು ತೆರಳಿದರು.

೭೩

ಸ್ತೋತ್ರಾರ್ಹಮಾದುದನೆ ನೆಗಳಿದಂದೆಲ್ಲರೂ ಹೊಗಳುತಿರಲುರೆನಾಚುತಂದು
ಹೊಗಳುವರ ಹಗೆದರೂ ಹೆಚ್ಚಿದುದು ಆ ಮಹೀಪಾಲಕನ ಕೀರ್ತಿ ತಾಂ ಬೆಳೆದು.

೭೪

ದುರಿತವನು ನೋಟದಿಂದಳಿಸಿದನು ನಶಿಸಿದನು ತತ್ವಾರ್ಥದಿಂದಂಧತೆಯನು
ಉದಯಿಸಿದ ರವಿಯವೋಲಂತು ಜನರೆಲ್ಲರನು ಆತ್ಮವಶರೆನಿಸಿದನು ನೃಪನು.

೭೫

ನೈದಿಲೆಯನೊಳವೊಗದು ರವಿಕಿರಣ ಶಶಿಕಿರಣವೊಳವೊಗದು ಬಿರಿವ ತಾವರೆಯ
ಆದರೇನೊಳವೊಕ್ಕವರಿಯ ಬಗೆಯೊಳಗನಿರದೊಳ್ಗುಣಗಳಾಗುಣಾಗ್ರಣಿಯ.

೭೬

ಅಶ್ವಮೇಧಾರ್ಥಮುಜ್ಜುಗಿಸಿದವನೀಶ್ವರನ ವಿಜಯಪ್ರಯತ್ನಂಗಳಂದು
ಸೈತಾದವರಿವಂಚನೋಪಾಯಮೆನಿಸಿಯುಂ ಸದ್ಧರ್ಮಸಿದ್ಧಿಯೊಳು ಸಂದು.

೭೭

ಶಾಸ್ತ್ರನಿರ್ದಿಷ್ಟಪಥದಿಂದಿಂತು ಪರಮಪ್ರತಾಪದಿಂದಭಿವೃದ್ಧಿಯಾಂತು
ಆ ದೇವದೇವನಾದಿಂದ್ರನೊಲು ರಾಜರಾಜೇಶ್ವರನು ಆದನು ಸಮಂತು.

೭೮

ಐದನೆಯ ಪಾಲನೆಂದಾರನೆಯ ಭೂತನೆಂದೆಂಟನೆಯ ಕುಲಶೈಲನೆಂದು
ಸಾಧರ್ಮ್ಯಯೋಗದಿಂದತಿಥಿಭೂಮೀಶನನು ಗಣಿಸಿದರು ಲೋಕದವರಂದು.

೭೯

ಶಾಸನಾರ್ಪಿತಮೆನಿಸಿದತಿಥಿಯೊಂದಾಣತಿಯ ಛತ್ರಿಯನು ಬದಿಗೊತ್ತಿ ನೃಪರು
ತಲೆಯೊಳಾಂತಪರವರು ದೇವೇಂದ್ರನಾಜ್ಞೆಯನು ತಳೆವಪರವೆಂತಂತು ಸುರರು.

೮೦

ಆ ಮಹಾಕ್ರತುವಿನೊಳು ದಕ್ಷಿಣೆಯನವನಿತ್ತನರ್ಚಿಸಿದ ಋತ್ವಿಜರಿಗೆರೆದು
ತನ್ನ ಮೇಸಾಧನದನಂಕಿತಗಳೊಂದಾಗುವೋಲತಿಥಿ ಭೂಪನಂದೊಲಿದು.

೮೧

ರೋಗದುಬ್ಬನು ಯಮನು ತಡೆದನು
ಕಾಲಕಾಲಕೆ ಮಳೆಯ ಸುರಿಸಿದನಿಂದ್ರನು
ಸುಕರಗೊಳಿಸಿದನಂಬುಪಥವನು
ನಾವಿಕರ್ಗಳಿಗಂದು ಯಾದೋನಾಥನು
ನೆನೆದು ರಘುರಾಮಾದಿ ನೃಪರನು
ಧನದನತಿಥಿಯ ಕೋಶವೃದ್ಧಿಯ ಗೈದನು
ಶರಣುಬಂದವರಂತೆ ನಡೆದರು
ದೊರೆಯೊಳಿಂತಾ ಲೋಕಪಾಲಕರೆಲ್ಲರು.

## ಹದಿನೆಂಟನೆಯ ಸರ್ಗ

# ವಂಶಾನುಕ್ರಮ

೧

ಅರ್ಥಪತಿನೈಷಧನ ವರಸುತನೊಳಾನೃಪನು
ನಿಷಧಪರ್ವತರಾಜಸಮನನೊರ್ವನನು
ಪಡೆದನು ಕುಮಾರನನು ಅನ್ಯೂನಸಾರನನು
ನಿಷಧನೆಂದಾತನನು ಹೆಸರಿಟ್ಟನವನು.

೨

ಜನರಕ್ಷಣಾರ್ಥಮೆನಲುರುವೀರ್ಯದಿಂದೆಸೆವ
ತದ್ಯುವಕಸುತನಿಂದೆ ಗುರು ನಲಿದನಂದು
ಸುವೃಷ್ಟಿಯೋಗದೊಳು ತಾಂ ಫಲೋನ್ಮುಖಿಯೆನುವ
ಸಸ್ಯದಿಂ ನಲಿವಂತೆ ಈ ಜೀವಲೋಕ.

೩

ಚಿರಕಾಲಮನುಭವಿಸಿ ಶಬ್ದಾದಿಸುಖಗಳನು
ಆತನೊಳು ನೆಲೆಗೊಳಿಸಿ ರಾಜಶಬ್ದವನು
ಕೌಮುದ್ವತೀಯನಂದಡರಿದನು ನಾಕವನು
ಕುಮುದಾವದಾತನಿಜಕರ್ಮಲಬ್ಧವನು.

೪

ಏಕೈಕವೀರನು ಕುಶೇಶಯ ವಿಲೋಚನನು
ನಿಷಧನೃಪನಾಪುರಾರ್ಗಳದೀರ್ಘಭುಜನು
ಕುಶಪೌತ್ರನಬ್ಧಿಗಂಭೀರಮನನಾಳಿದನು
ಏಕಾತಪತ್ರದಿಂದಬ್ಧ್ಯಂತ ಧರೆಯ.

೫

ಆವನಬಳಿಕನ್ವಯಶ್ರೀಯನನುಭವಿಸಿದನು
ನಳಿನಾಭವಕ್ತ್ರನನಿಲೋಜನಾನಳನು
ರಿಪುಬಲವ ಮರ್ದಿಸಿದನಾನಳೇಶ್ವರನವನು
ನಡ್ವಲವ ಮರ್ದಿಪೊಲು ನಾಗೇಂದ್ರ ತಾನು.

೬

ಆಬಳಿಕ ಪಡೆದನು ನಭಶ್ಚರಸ್ತುತಯಶನು
ವರನಭಶ್ಯಾಮುತನುತನುಜನನು ತಾನು
ನುತನಭೋಮಾಸದೊಲು ಜನರೊಲುಮೆ ಗಳಿಸಿದನು
ನಭನಾಮದಿಂದವನು ಕೀರ್ತಿಗಳಿಸಿದನು.

೭

ಪ್ರಭವನಾದಾತನೊಳಯೋಧ್ಯಾಧಿಪತ್ಯವನು
ಧರ್ಮಪ್ರಧಾನನಾನಳನಿರಿಸಿ ನಡೆದು
ಜರೆಯೊರೆಯಿತೆಂದು ಮಿಗವಿಂಡಿನೊಳು ನೇಹವನು
ಬೆಳಸಿದನದೇಹಬಂಧವನೆಳಸುತೆಂದು.

೮

ನಭಸುತನು ಪುಂಡರೀಕನಜೇಯನರಸರೊಳು
ದಿಗಿಭಗಳಲಾಪುಂಡರೀಕದಂದದೊಳು
ಪುಂಡರೀಕವ ಪಿಡಿದು ಪುಂಡರೀಕಾಕ್ಷನನು
ಸಾರುವೊಲು ಸಾರಿದಳು ಲಕ್ಷ್ಮಿಯಾತನನು.

೯

ಕ್ಷಮಯೋಪಪನ್ನನನು ಕ್ಷೇಮಧನ್ವಾಖ್ಯನನು
ತತ್ಪ್ರಜಾಕ್ಷೇಮಸಂರಕ್ಷಣಕ್ಷಮನನು
ಕ್ಷ್ಮಾಪಾಲನಕ್ಕಿರಿಸಿ ಕ್ಷಾಂತತರನೈದಿದನು
ತಪಕೆಂದು ತದವೋಘಧನ್ವಿ ಆ ಪಿತನು.

೧೦

ಸಮರದೊಳನೀಕಿನಿಯ ಮುಂದುಗಡೆ ನಡೆವವನು
ದೇವಸಮನೆನುವವನು ಆ ನೃಪನು ಸುತನು
ದೇವಪದವಾದಿಯೊಳನೀಕಪದವಂತ್ಯದೊಳು
ಮೆರೆವ ಹೆಸರೆಸೆದತ್ತು ದೇವಲೋಕದೊಳಂ.

೧೧

ಶುಶ್ರೂಷೆಗೈಯುತಿಹ ಪುತ್ರನಿಂದಾಪಿತನು
ಪುತ್ರಿ ತಾನೆಂತಾದನೀಪುತ್ರನಂತು
ಆತ್ಮಜಪ್ರೀತಿನಿರ್ಭರಭರಿತಪಿತನಿಂದ—
ಲೆಸೆದಪನು ಪಿತೃಮಂತನಾಗಿರೆ ಸಮಂತು.

೧೨

ಗುಣಗಳೇಕೈಕನಿಧಿ ಅವರೊಳಾಮೊದಲಿಗನು
ಆತ್ಮಸುತ ಆತ್ಮಜನೊಳಾಯಜ್ವನೊಲಿದು
ಪಲಕಾಲಮಾಂತುದನು ಯಜ್ಞರಕ್ಷಣಧುರವ—
ನಿರಿಸಿದನು ಯಜಮಾನಲೋಕವನು ಕುರಿತು.

೧೩

ಇನಿನುಡಿಯಿನೊಲಿದಿಹನು ತನ್ನವರನನ್ಯರನು
ಆ ನೃಪಕುಮಾರನು ಜಿತೇಂದ್ರಿಯನು ತಾನು
ಮೊದಮೊದಲು ಮಿಗವಿಂಡು ಅಂಜಿ ಓಡಿದರೇನು
ಮೃದುಮಧುರ ಗಾನದೊಳು ವಶವಾಗದಿಹವೆ?

೧೪

ಹೀನಸಂಗತ್ಯಾಗದಿಂದನರ್ಥವ್ಯಸನ
ಹೀನನು ಅಹೀನಗು ಕುಮಾರಕನು ತಾನು
ಆ ಬಳಿಕತಾಳಿದನಹೀನಭುಜವಿಕ್ರಮನು
ಈ ಮಹೀತಲಸಮಸ್ತವನು ನೃಪವರನು.

೧೫

ಪುರುಷರಾಂತರ್ಯವನು ಬಲ್ಲವನು ಪರಿಣತನು
ಅವತರಿಸಿದಾಆದಿಪುರುಷನೊಲು ಅವನು
ಪಿತನ ಸಮನಂತರದೊಳಾಚತುರ್ದಶಿಗಳನು
ಆಳಿದನು ಸಫಲಚತುರೋಪಾಯಯುತನು.

೧೬

ತೊಡಗಿದಂದರಿಜೇತೃ ಪರಲೋಕಯಾತ್ರೆಯನು
ಸಾರಿದಳು ಲಕ್ಷ್ಮಿ ಆ ರಾಜಾತ್ಮಜನನು
ಮಸ್ತಕೋನ್ನತಿಯಿಂದಲಾಪಾರಿಯಾತ್ರವನು
ಗೆಲ್ದವನನಾಪಾರಿಯಾತ್ರನೆನುವನನು.

೧೭

ಶಿಲನೊಗೆದನಾತನಿಗುದಾರಶೀಲನು ಸುತನು
ಶಿಲೆಯ ಫಲಕದವೊಲು ವಿಶಾಲೋರುಯುತನು
ನಿಜಶಿಲೀಮುಖದಿಂದಲರಿಗಣವನರಿದವನು
ಪೊಗಳುವೊಡೆ ಶಾಲೀನತೆಯನಾನುತವನು.

೧೮

ಯುವರಾಜನೆನಿಸಿದನನಿಂದಿತಾತ್ಮನು ಅವನು
ಆತ್ಮಸಂಪನ್ನನನು ಆಯುವಾನನನು
ಬಂದಿಗಳ ವೃತ್ತಿಯೊಲು ಕ್ಷತ್ರಿಯರ ವೃತ್ತಿಯದು
ನೋಡುವೊಡೆ ಸೌಖ್ಯೋಪರೋಧಿಯಹುದು.

೧೯

ರಾಗವರ್ಧಕಸುಖದೊಳವಿತೃಪ್ತನೆನುವನನು
ಬೆಡಗಿಯರ ಸೊಬಗಿನಿಂದಿನ್ನುವೊಲಿವನನು
ರತಿಯ ಸಾಮರ್ಥ್ಯವನು ಪಡೆಯದ ಜರಾವನಿತೆ
ಬರಿದೆ ಮಾತ್ಸರ್ಯದೊಳು ತಾಂ ಸೆಳೆದಳಲ್ತೆ.

೨೦

ಉನ್ನಾಭನೆನುವವನು ವಿಖ್ಯಾತನಾದವನು
ಅನ್ವರ್ಥನುನ್ನತಸುನಾಭಿಯುತಸುತನು
ಉದಯಿಸಿದನರವಿಂದನಾಭಸಮನೆನುವವನು
ನೃಪತಿಮಂಡಲನಾಭಿಯೆನೆ ಮೆರೆಯುವವನು.

೨೧

ವಜ್ರಧರನಿಭತೇಜನುನ್ನಾಭನಾತ್ಮಜನು
ಧುರಧರೆಯೊಳುಗ್ರಮಪ್ಪಾವಜ್ರಧರನು
ವಜ್ರಾಕರಾಭರಣಶೋಭಿತವಸುಂಧರೆಯ
ನಾಳಿದನು ವಜ್ರಣಾಭಾಂಕಿತನು ಅವನು.

೨೨

ಸುಕೃತೋಪಲಬ್ಧವಹ ದಿವಿಯನೈದಿದನವನು
ಉತ್ಪಾತಶತ್ರುವನು ಸೂನು ಶಂಖಣನನು
ಆಕರೋದಿತರತ್ನಹಾರಗಳನರ್ಪಿಸುತೆ
ಸೇವಿಸಿದಳುದಧಿವೇಷ್ಟಿತೆ ಧರಾವನಿತೆ.

೨೩

ಹರಿದಶ್ವಧಾಮನಂದವನಾವಸಾನದೊಳು
ಅಶ್ವರೂಪನು ಕುಳಿತು ಗುರುವಿಷ್ಟರದೊಳು
ಅಶ್ವಸೇನೆಯನಿರಿಸಲಬ್ಧಿಯ ತಟಂಗಳೊಳು
ವ್ಯುಷಿತಾಶ್ವನೆಂದೊರೆದರಾಪುರಾವಿದರು.

೨೪

ವಿಶ್ವೇಶ್ವರಾರ್ಚನೆಯೊಳಾಂತನು ನರೇಶ್ವರನು
ತನ್ನಿಜಾಪರರೂಪನಾದಪತ್ಯನನು
ವಿಶ್ವಸಹನೆನುವನನು ವಿಶ್ವಸಖನಾದನನು
ವಿಶ್ವಸಂರಕ್ಷಣಸಮರ್ಥನಾದನನು.

೨೫

ಆ ಹಿರಣ್ಯಾಕ್ಷಾರಿಯಂಶದೊಳಪತ್ಯಕನು
ಒಗೆದನು ಹಿರಣ್ಯನಾಭಾಂಕಿತನು ತಾನು
ಸಾನಿಲಹಿರಣ್ಯರೇತನು ವೃಕ್ಷಗಳಿಗೆಂತು
ದುಸ್ಸಹನು ವಿಶ್ವಸಹನರಿವೃಂದಕಂತು.

೨೬

ರಾಜನಂ ಗೈದು ಆ ಆಜಾನುಬಾಹುವನು
ಕೃತಕೃತ್ಯನಾದವನು ಮುಕ್ತಪಿತೃಋಣನು
ಅವಸಾನಕಾಲದೊಳು ತದನಂತಸುಖರತನು
ವಲ್ಕಲಾಂಬರಧಾರಿಯಾದನಾನೃಪನು.

೨೭

ಸೂರ್ಯಕುಲಭೂಷಣನೊಳಾಸೋಮಯಾಜಿಯೊಳು
ಮೆರೆವ ಉತ್ತರಕೋಸಲಾಧೀಶ್ವರನೊಳು
ಕಣ್ಣಿಗುತ್ಸವವೀಯುವೆರಡನೆಯ ಸೋಮನೊಲು
ಜನಿಸಿದನು ಕೌಸಲ್ಯನೌರಸನು ಸುತನು.

೨೮

ಬ್ರಹ್ಮಜ್ಞನಾದನನು ಬ್ರಹ್ಮಿಷ್ಠನೆನುವನನು
ಸ್ವಾಧಿಕಾರದೊಳಿರಿಸುತಾಸ್ವಾತ್ಮಜನನು
ಆ ಬ್ರಹ್ಮವರಸಭಾಂತಶ್ರಾಂತಯಶಯುತನು
ಬ್ರಹ್ಮಗತಿಗೈದಿದನು ಕೌಸಲ್ಯನೃಪನು.

೨೯

ಶಾಸನಾಂಕಿತಮಹಿಯನಾಳಿದನು ಸುಪ್ರಜನು
ಅನ್ವಯಾಪೀಡನಿಭನಾಪ್ರಜೇಶ್ವರನು
ನಿಷ್ಪೀಡಮಾದೊಳ್ಪಿನಾಳ್ವಿಕೆಯೊಳಾಪ್ರಜರು
ಹರ್ಷಾಶ್ರುಕಲಿತಾಕ್ಷರಾನಂದಿಸಿದರು.

೩೦

ಪಿತ್ರಾದಿಸೇವೆಯಿಂದರ್ಹತೆಯನಾಂತವನು
ಪತ್ರರಥಕೇತುವೋಲೆಸೆಯುತಿರುವವನು
ಪುತ್ರವಂತರೊಳು ಪಿತನಗ್ರಸೆನಲೆಸಗಿದನು
ಪದ್ಮಪತ್ರಾಂಬಕನು ಪುತ್ರನಾಮಕನು.

೩೧

ವಿಷಯತೃಷ್ಣಾಮುಕ್ತನಾದವನು ಆ ನೃಪನು
ಬ್ರಹ್ಮಿಷ್ಠನಮರೇಂದ್ರಸಖನಾಗುವವನು
ಬೆಳಗುವನು ವಂಶವನು ವಂಶಕರನೆಂದರಿದು
ಆ ತ್ರಿಪುಷ್ಕರದೊಳಳ್ದಾಂತನಮರತೆಯ.

೩೨

ಆ ಪುತ್ರನೃಪಪತ್ನಿ ಪುಷ್ಯಪೂರ್ಣಿಮೆಯಂದು
ಪ್ರಭೆಯಿಂದಲಾಪುಷ್ಯರಾಗವನು ಗೆಲ್ದು
ಮೆರೆವ ಪುಷ್ಯಾಖ್ಯನನು ಪೆತ್ತಂದು ಪುಷ್ಟಿಯನು
ಜನಮಾಂತುದಾಪುಷ್ಯನಿಭನೊಗೆದನೆಂದು.

೩೩

ಮಹಿಯನು ಮಹೇಚ್ಛನಂದಾತ್ಮಜನೊಳುಳಿದವನು
ಬ್ರಹ್ಮವಿತ್ ಜೈಮಿನಿಯನಾಶ್ರಯಿಸಿ ನೃಪನು
ಆತನುಪದೇಶಿಸಿದ ಯೋಗವಿದ್ಯೆಯಿನಂದು
ಜನಿಭೀರು ನಿರ್ಜನ್ಮಪದವೆಗ್ದೈದಿದನು.

೩೪

ತತ್‌ಪ್ರಭವನುರ್ವಿಯನು ಬಳಿಕ ತಾನಾಳಿದನು
ಧ್ರುವಸಂಧಿಯೆನುವವನು ಧ್ರುವಸದೃಶ ನೃಪನು
ವರಸತ್ಯಸಂಧನೊಳು ನಮಿತಾರಿ ಜನಸಂಧಿ
ಧ್ರುವಪದವ ತಾನಾಂತು ಮೆರೆದಿರ್ದುದಂದು.

೩೫

ದರ್ಶಾತ್ಯಯೇಂದುವೊಲು ಪ್ರಿಯದರ್ಶನಾದವನು
ಪುತ್ರನು ಸುದರ್ಶನನು ಎಳೆಯನಿರುವಂದು
ಮೃಗದೀರ್ಘಲೋಚನನು ಮೃಗಯಾವಿಹಾರದೊಳು
ಸಿಂಹದಿಂದಳಿದನು ನೃಸಿಂಹನವನಿಪನು.

೩೬

ಅಮರನಾದವನಿಸನಮಾತ್ಯರುಗಳ್ಯೆತಂದು
ತಬ್ಬಲಿಗಳಾಗಿರುವ ಪುರಜನರ ನೆನೆದು
ವಿಧ್ಯುಕ್ತರೀತಿಯೊಳು ವಂಶೈಕತಂತುವನು
ಸಾಕೇತದೊಡೆಯನೆನಲೆಸಗಿರ್ದರಂದು.

೩೭

ಸಿಂಹಶಾಬಕದಿಂದಲೆಸೆವ ಕಾನನದಂತೆ
ಬಾಲಶಶಿಯಿಂದೆಸೆಯುವಾಕಾಶದಂತೆ
ಕಮಲಕುಟ್ಮಲಕಲಿತ ವರಸರೋವರದಂತೆ
ರಘುಕುಲವು ಬಾಲನೃಪನಿಂದೆಸೆದುದತ್ತೆ.

೩೮

ಮಕುಟವನು ತಳೆದ ಆ ಬಾಲನನು ಕಂಡವರು
ಅಪ್ಪನವೊಲಿರ್ಪನಿವನೆಂದೂಹಿಸಿದರು
ಮರಿಯಾನೆ ಮುಗಿಲೊಂದು ಮುಂಗಾಳಿಯಾಂತಂದು
ದಿಕ್ಕುಗಳ ಮುಕುರುವೊಲು ಗೋಚರಿಸದೇನು !

೩೯

ಚಾರುವೇಷವ ತಳೆದು ಮಾವುತನ ನೆರವಾಂತು
ಆನೆಮೇಲ್ಯೆತರಲು ನೃಪಕುಮಾರಕನು
ತಂದೆಯನು ಕಂಡವೊಲೆ ಷಡ್ವರ್ಷದರಸನನು
ಗೌರವದೆ ನೋಡಿದರು ಪುರಜನರು ನಲಿದು.

೪೦

ಹಿರಿಯರಾಹಿರಿಯ ಸಿಂಹಾಸನವು ತುಂಬಿದೊಲು
ಕುಳಿತುಕೊಳಲಾದನಾಬಾಲನಕ್ಷಮನು
ಹೇಮಕಾಂತಿವೊಲುಗುವ ನಿಜಮಹಿಮೆಯಿಂದವನು
ವಿಸ್ತರದೊಳುಳಿದೆಡೆಯ ತಾಂ ತುಂಬಿದಪನು.

೪೧

ಹರಿಪೀಠದಿಂದಿಳುಹಿದವನ ಕುರುಗಾಲುಗಳು
ಕನಕಮಯ ಕಾಲ್ಮಣೆಯ ಸೋಂಕದೊಡಮುಂದು
ಅಲತಿಗೆಯ ಕೆಂಪೆಸೆಯುವವನಡಿಯನೆರಗಿದರು
ಉನ್ನತ ಕಿರೀಟಧರರಾಧರಾಧಿಪರು.

೪೨

ಚಿಕ್ಕದಾದರು ರತ್ನ ಅಮಿತತೇಜವ ತಳೆದು
ವರಮಹಾನೀಲಮಣಿಯೆನಿಸಿಕೊಳುವಂತೆ
ಕಿರಿಯನಾದರು ನೃಪನು ಅಮಿತತೇಜವ ತಳೆದು
ವರಮಹಾರಾಜನೆಂದೆಸೆದನಂದಲ್ತೆ.

೪೩

ಚಾಮರಗಳಿಕ್ಕೆಲದೊಳಾಡುತಿರೆ ಕೆನ್ನೆಯೊಳು
ಜೋಲ್ದಿಳಿದ ಕಾಕಪಕ್ಷಗಳಲುಗುತಿರಲು
ಆ ಮುಖೋತ್ಪನ್ನಮಾದಾಣತಿಯ ನುಡಿಗಳವು
ಕಡಲದಂಡೆಯ ತನಕ ಭಂಗಗೊಳದಿಹವು.

೪೪

ಕನಕಪಟ್ಟದೊಳೆಸೆವ ಫಾಲಫಲಕದೊಳವನು
ತಿಲಕವನು ತಿದ್ದಿಟ್ಟ ಆ ಸ್ಮೇರಮುಖನು
ಅರಿಸುಂದರಾಂಗಿಯರ ವದನಾರವಿಂದದೊಳು
ಅಂಥ ಆ ತಿಲಕವನು ಅಳಿಸಿದನು ನೃಪನು.

೪೫

ಅಧಿಕಸುಕುಮಾರಯುತನಾತನು ಶಿರೀಷದೊಲು
ಭೂಷಣಗಳಿಂದೆಯುಂ ಕಡುಬಳಲುವವನು
ಆ ಬಾಲಭೂಪಾಲನನುಭಾವವಶದಿಂದೆ
ಗುರುತರದ ಧಾರಿಣಿಯ ಧುರವ ಧರಿಸಿದನು.

೪೬

ಹಲಗೆಯೊಳು ಬರೆದುಕೊಟ್ಟಖಿಳಾಕ್ಷರಂಗಳನು
ಕಲಿತುಕೊಳುವಷ್ಟರೊಳು ಆ ಸುದರ್ಶನನು
ದಂಡನೀತಿಯ ಸರ್ವಫಲವನನುಭವಿಸಿದನು
ಜ್ಞಾನವೃದ್ಧರ ದಿವ್ಯಸನ್ನಿಧಿಯೊಳವನು.

೪೭

ಅವನೆದೆಯೊಳಲ್ಪಾವಕಾಶವಿಹುದೆನುವುದನು
ನೆಲಸಲೆಂದೈತಂದ ಲಕ್ಷ್ಮಿ ತಾನರಿತು
ಅಪ್ಪಿದಳು ಬೆಳ್ಗೊಡೆಯ ನೆಳಲಿನ ನಿಮಿತ್ತದೊಳು
ಸಾಕ್ಷದಾಲಿಂಗನಕೆ ನಾಣ್ಚಿದಪಳೆನಲು.

೪೮

ನೊಗದ ಹೋಲಿಕೆಯಿರದ ಹೆದೆಯ ಕಿಣಮಣಮಿರದ
ಕೂರಸಿಯ ಆ ಹಿಡಿಯ ಸೋಂಕೆನಿಸುಮಿರದ
ಆ ಬಾಲರಾಜಭುಜಮಾತ್ರದಿಂದಿಳೆಯಂದು
ತಾಂ ಸುರಕ್ಷಿತಮಾದುದರಿಭಯವನುಳಿದು.

೪೯

ದೇಹದಂಗಾಂಗಗಳೆ ಕಾಲ ಕಳೆದಂತೆಲ್ಲ
ಬೆಳೆಬೆಳೆದು ಶೋಭಿಸುತಲೆಸೆದುವೆಂದಲ್ಲ
ಜನಮನಃಪ್ರಿಯಮೆನಿಸಿದನ್ವಯದ ಗುಣಗಳುಂ
ದಿನದಿನಕೆ ಆತನೊಳು ಬೆಳೆದು ಬೆಳಗಿದವು.

೫೦

ತಾಂ ಪೂರ್ವಜನ್ಮದೊಳು ಕೊನೆಗಂಡುದನ್ನಿಂದು
ನೆದೆವವೋಲೋಜರನು ಬಳಲಿಸದೆ ನೃಪನು
ವರ್ಗಮೂರರ ಮೂಲವೆನಿಪ ಮೂಬಿಜ್ಜೆಯನು
ಗಳಿಸಿದನು ಮೇಣ್ ಜನರಧೀನತೆಯನವನು.

೫೧

ಮೈಯ ಮೊದಲರ್ಧವನು ಹಸರಿಸುತಲೊಂದಿನಿಸು
ಮೇಣಂತೆ ಕಿರಿದುಗೈದೆಡದೊಡೆಯನಿನಿಸು
ತಲೆ ಕುರುಳ್ಗಳ ಕಟ್ಟಿ ಕಣೆಯ ಕಿವಿವರೆಗೆಳೆದು
ಚಾಪವಿದ್ಯಾಕುಶಲನನನೆಸೆದನಂದು.

೫೨

ಪೆಣ್ಗಳೊಲಿದು ಕಣ್ಗಳಿಂದಲೀಂಟಿ ನಲಿವ ಮಧುವಿದು
ರಾಗವೆನುವ ಚಿಗುರೊಳೆಸೆವ ಮನಸಿಜತರುಸುಮವಿದು
ಕೃತಕವಲ್ಲದೆಲ್ಲ ಅವಯವಂಗಳಾಭರಣವಿದು
ಮೆರೆಯಲಿರುವ ಮೊತ್ತಮೊದಲನೆಯ ವಿಲಾಸಪದವಿದು
ಇಂತು ಮೆಗೆವ ಯೌವನವನು ತಳೆದನಾ ಸುದರ್ಶನಾಖ್ಯನು.

೫೩

ಶುದ್ಧಸಂತಾನವನು ಬಯಸಿದ
ಮಂತ್ರಿಜನ ಕರೆತಂದ ಪೆಣ್ಗಳು
ದೂತಿಯರು ತೋರಿಸಿದ ತನ್ಮೂ್ತ
ಕೃತಿಯ ಪ್ರತಿಕೃತಿಗಿಂತ ಚೆಲುವಾದರಸುಕುವರಿಯರು
ತರುಣನೃಪನ ಸುದರ್ಶನಾಖ್ಯನ
ನೊಲಿದು ಆ ನೃಪನದಕು ಮೊದಲೆಯೆ
ಪ್ರೀತಿಯಿಂ ಕರವಿಡಿದ ಭೂ ಶ್ರೀ
ವನಿತೆಯರ್ಕಳ ಜೊತೆಯ ಸವತಿಯರಾದರಂದವರು.

---

## ಹತ್ತೊಂಭತ್ತನೆಯ ಸರ್ಗ

# ಅಗ್ನಿವರ್ಣಶೃಂಗಾರ

೧

ಅಗ್ನಿತೇಜನ ಸುತನನಾಅಗ್ನಿವರ್ಣನನು
ವಶಿ ತನ್ನ ಪದದೊಳೊಲಿದಭಿಷೇಕಗೈದು
ಪಶ್ಚಿಮವಯಸ್ಸಿನೊಳು ಶ್ರುತವಿದರಪಶ್ಚಿಮನು
ಸಾರಿದನು ರಾಘವನು ಆ ನೈಮಿಶವನು.

೨

ಭೂಮಿಯೊಳು ಹರಹಿದ ಕುಶಂಗಳೊಳು ತಲ್ಪವನು
ಆ ತೀರ್ಥಸಲಿಲದೊಳು ವರದೀರ್ಘಿಕೆಯನು
ಎಲೆವನೆಯೊಳಾ ಸೌಧವಾಸವನು ಮರೆತವನು
ಫಲನಿಸ್ಪೃಹಸ್ತಪವನೆಸಗಿದನು ತಾನು.

೩

ಲಬ್ಧಪಾಲನವಿಧಿಯೊಳಾಸುತನು ಖೇದವನು
ತಳೆದುದಿಲ್ಲರಿಗಳನು ದಲ್ ತೋಳ್ಬಲದೊಳು
ಗೆಲಿದಯ್ಯನಿಳೆಯ ಮಗನನುಭವಿಸಲಿತ್ತಿಹನು
ಕೇಡಿಗರ ಕಳೆದೊಗೆಯಲೆಂದಿತ್ತನೇನು.

೪

ಅನ್ವಯಾಗತಮಾದ ರಾಜ್ಯಾಧಿಕಾರವನು
ಕೆಲಕಾಲ ನಡಸಿದನು ಆ ಅಭಿಕನೃಪನು
ಬಳಿಕದನು ಸಚಿವರೊಳು ಸಲೆ ನಿಲಿಸುತಿರಿಸಿದನು
ಅಬಲೆಯರೊಳಾತನ್ನ ಯೌವನವನು.

೫

ಕಾಮಿನೀಸಹಚರನಿಗಾಕಾಮುಕಂಗಂದು
ನವಮೃದಂಗಧ್ವನಿಯು ಹರ್ಮ್ಯಾಗ್ರಗಳಲಿ
ಹಿಂದಣ ಮಹೋತ್ಸವಗಳೊಂದೊಂದುಮುಳಿಸಿದುದು
ಆ ಮುಂದಣಧಿಕತರಮೆನಿಸಿದುತ್ಸವದೆ.

೬

ಶಬ್ದಾದಿವಿಷಯಸುಖಶೂನ್ಯವೆನುವೇಕಕ್ಷ—
ಣಾಂತರವನಾದರೂ ತಾಂ ಸಹಿಸದಂದು
ಅಕ್ಷಮನು ದರ್ಶನೋತ್ಸುಕಜನರನೀಕ್ಷಿಸದೆ
ರಮಿಸಿದನು ಪಗಲಿರುಳುವೊಲಿದಂತವುರದೆ.

೭

ಮಂತ್ರಿಜನಗೌರವದಿನೆಂದಾದರೊಂದುದಿನ
ಜನರೆಳಸಿದೊಂದಾತ್ಮದರ್ಶನವ ನೃಪನು
ತಾನನುಗ್ರಹಿಸುವನು ತನ್ನೊಂದು ಚರಣವನು
ಕೇವಲ ಗವಾಕ್ಷದೊಳು ತೋರುತ್ತಲವನು.

೮

ಮೂಡುವೆಳನೇಸರಿನ ಕೆಂಬಿಸಿಲ ಕಾಂತಿಯೊಳು
ಬಿರಿವ ತಾವರೆಯೆನಲು ತೋರುತೆಸೆದಿರಲು
ಥಳಥಳಿಸುವಾ ತನ್ನ ಎಳೆಯುಗುರ ಪೊಗರಿನೊಳು
ಮೆರೆವಡಿಯ ಸೇವಿಸಿದರನುಚರರು ಮಣಿದು.

೯

ಯೌವನೋನ್ನತವಿಲಾಸಿನಿಯರ ಕುಚಾಗ್ರದೊಳು
ಕ್ಷೋಭೆವಡೆದಲೆಯಲೆವ ಕಮಲಾಕರದೊಳು
ಗೂಢಮೋಹನಗೃಹದೊಳಾಗಾಢಮನ್ಮಥನು
ಚೆಲ್ಲಾಟವಾಡಿದನು ವರ ನಾರಿಯರೊಳು.

೧೦

ನೀರಾಟದೊಳು ತೊಳೆದ ಕಾಡಿಗೆಯ ಕಣ್ಣಿನೊಳು
ಕೆಂಬಣ್ಣವಳಿಸಿರುವ ಕೆಳದುಟಿಯೊಳವರು
ನೈಜಕಾಂತಿಯೊಳೆಸೆವ ಮುಖಗಳಿಂದಾತನೊಳು
ಮೋಹವನು ಹೆಚ್ಚಿಸಿದರವನಂಗನೆಯರು.

೧೧

ಘ್ರಾಣಕಮನೀಯಮಧುಗಂಧದೊಳು ಬಗೆಗೊಳುವ
ವರಪಾನರಚನೆಗಳನಾಪ್ರಿಯಾಸಖನು
ಗಂಡಾನೆ ಪಿಡಿಯೊಡನೆ ಅರಳಿದರವಿಂದವನು
ಸಾರುವೊಲು ಸಾರಿದನು ಮೋದವಾಂತವನು.

೧೨

ಉದ್ರೇಕಹೇತುವಾದವನ ಮುಖಮದಿರೆಯನು
ಗುಟ್ಟಿನೊಳಗಿತ್ತುದನು ಸತಿಯರೆಳಸಿದರು
ಆ ನೃಪನುಮೆಳಸಿದನು ಬಕುಳಸಮದೋಹದನು
ಅಂಗನೆಯರಾನನದ ಆಸವಾಂಬುವನು.

೧೩

ಅಂಕಪರಿವರ್ತನಾರ್ಹಂಗಳೆನಿಪೊಂದೊಂದು—
ಮಂಕಮನಶೂನ್ಯಮೆನಲೆಸಗಿರ್ದವಂದು
ವಲ್ಗುವಾಕ್ಕಿನೊಳೆಸೆವ ಆ ಚಾರು ಪೆಣ್ಣೊಂದು
ಹೃದಯಂಗಮಸ್ವನದ ವೀಣೆ ಮೇಣೊಂದು.

೧೪

ಹಾರಕೇಯೂರಂಗಳಲಗುತಿರಲಾಕುಶಲಿ
ತಾನೆ ಮದ್ದಳೆ ನುಡಿಸಿ ಮನಸೆಳೆಯಲೊಲಿದು
ಆಚಾರ್ಯರೆದುರಿನೊಳೆ ಅಭಿನಯವ ತಪ್ಪಿದರು
ನಾಣ್ಗೊಂಡರಾ ಎಲ್ಲ ವರ ನರ್ತಕಿಯರು.

೧೫

ನಾಟ್ಯಾವಸಾನದೊಳು ಸೇದೆಯಿಂದೊಗೆದಿಳಿದು
ಬೆಮರಹನಿ ತಿಲಕವನು ಅಳಿಸುತಿರಲಂದು
ಅಳ್ತಿಯಿಂ ಮುದ್ದಿಸುತಲಾನನವನೂದಿದನು
ಮೀರಿಸಿದನಮರಾಲಕೇಶ್ವರರನವನು.

೧೬

ಆ ನೃಪನು ನವಕಾವ್ಯವಸ್ತು ರತನಾದಂದು
ಸಾವರಣದೃಷ್ಟಸಾಧನಗಳನು ತಿಳಿದು
ವಿಷಯೋಪಭೋಗಸುಖದಾಅರ್ಥಮಾತ್ರವನು
ಪಡೆವಪ್ರೋಲೆಸಗಿದರು ಸತಿಯರ್ಕೈತಂದು.

೧೭

ಚೆಂದಳಿರವ್ರೋಲಿರುವ ತುದಿಬೆರಳ ಬೆದರಿಕೆಯ
ಹುಬ್ಬು ಗಂಟಿಕ್ಕಿರುವ ಕುಡಿನೋಟದುರಿಯ
ನಲ್ಲೆಯರ ವಂಚಿಸುತಲನುಭವಿಪನವನಿಪನು
ಮತ್ತೆ ಸಲಸಲಕೆ ಆ ಮೇಖಲೆಯ ಸೆರೆಯ.

೧೮

ಸಂಭೋಗರಾತ್ರಿಗಳೊಳವನಿಪನು ಬಂದವನು
ಕಾದಲೆಯರರಿಯದೊಲು ಹಿಂದುಗಡೆ ಕುಳಿತು
ಆಳಿಯರು ಮಾತ್ರ ತಿಳಿವಂದದೊಳು ಕೇಳುವನು
ವಿರಹಶಂಕಿನಿಯರಾಲಾಪಗಳನಂತು.

೧೯

ಅರಸಿಯರ ಬಳಿಯೊಳಿರುತೈದಲಸದಳವೆನುವ
ನರ್ತಕೀಜನರೊಳನುರಕ್ತನೃಪನವನು
ಬೆರಳ ಬೆಮರಿನ ಕತದೆ ಕುಂಚ ಜಗುಳುತಲಿರಲು
ಚಿತ್ರಗಳ ಬರೆದೆಂತೊ ವೇಳೆಗಳೆದಪನು.

೨೦

ಸವತಿಯರು ಬಿಂಕಗೊಳಲರಸು ಮೆಚ್ಚಿಹನೆಂದು
ಕರುಬು ಬೆಳೆದಂಗಜವಿಕಾರದೊಳು ನೊಂದು
ಸಿಟ್ಟನುಳಿದರಸಿಯರು ಪಡೆದರವರಿಷ್ಟವನು
ಉತ್ಸವದ ನೆವದಿಂದಲಿನಿಯನನು ಕರೆದು.

೨೧

ಪರಿಭೋಗಶೋಭಿತನ ದರ್ಶನದೊಳರಸಿಯರು
ಮುನಿದುಕೊಳಲಿನನುದಯಕಿನಿಯನೈತರಲು
ಕೈಮುಗಿದು ಬೇಡಿಕೊಳುವನಿತರೊಳೆ ಮರಳಿದನು
ಗಣಿಕೆಯರ ಮೋಹದೊಂದಲಸಿಕೆಯೊಳವನು.

೨೨

ಕನಸಿನೊಳು ಸವತಿಯರ ನೆನೆದು ಕರೆವಾತನನು
ಅರಸಿಯರು ನುಡಿಯಿಸದೆ ತೊರೆಯುವರು ನೊಂದು
ಸಿಟ್ಟಿನೊಳು ಬೀಳುವುವು ಕೈಬಳೆಗಳೊಡೆದೊಡೆದು
ಮೇಲ್ವಾಸು ತೋಯುವುದು ಕಣ್ಣಹನಿ ಸುರಿದು.

೨೩

ದೂತಿಯರು ತೋರಿಸಿದ ಬಳ್ಳಿವನೆ ದಾರಿಯನು
ಕುರಿತು ನೃಪನೈದುವನು ಕಾಮಮೋಹಿತನು
ಅಲ್ಲಿ ಹೂಹಾಸುಗೆಯೊಳಾಳಿಯರ ನೆರೆಯುವನು
ಪೆಂಡವಾಸದ ಜನರಿಗಂಜಿ ನಡುನಡುಗಿ.

೨೪

ನಿನ್ನ ವಲ್ಲಭಜನರ ನಾಮವನು ಹೊಂದಿದೆವು
ಅವರೊಂದು ಭಾಗ್ಯವನುಮಾಶಿಸುತಲಿಹೆವು
ಕಟ್ವಾಸೆಗೊಂಡಿರುವುದೆಮ್ಮ ಬಗೆಯೆನ್ನುವರು
ಪೆರರ ಪೆಸರೆತ್ತಿದವನಿಪನನರಸಿಯರು.

೨೫

ಹರಿದ ಹೂಸರದಿಂದೆ ಕಿತ್ತ ಮೇಖಲೆಯಿಂದೆ
ಅಲತಿಗೆಯ ಕುರುಹಿಂದೆ ಕುಂಕುಮಗಳಿಂದೆ
ನೃಪನುಳಿದ ತಲ್ಪಮದು ನಿದ್ದೆ ತಿಳಿದೆದ್ದಂದೆ
ಅವನ ರತಿಕೇಳಿಗಳ ಸೂಚಿಸಿದುದಿರದೆ.

೨೬

ತಾನೆ ಬಳಿದಲತಿಗೆಯ ಸತಿಯರಡಿದಾವರೆಯ
ಸಿಂಗರಿಸುತಿರುವಂದು ಆ ಕಾಮಿ ದೊರೆಯ
ದಿಟ್ಟ ತಾನುಡೆಸಡಿಲಿದರಸಿತಿಯ ಕಟಿಯೆಡೆಯ
ಕಡೆಗೊಲಿಯಲಡಿಯಿಂದ ಪಡೆದತ್ತು ಕೊರೆಯ.

೨೭

ಚುಂಬನಕೆ ಕೆಳದುಟಿಯನೀಯದೆಯೆ ತಿರುಗಿಸಿರೆ
ಉಡೆಯ ಕಳಚುವ ಕೈಯನಿರದೆ ನೂಂಕುತಿರೆ
ಎಲ್ಲೆಡೆಯೊಳೊಡೆದೊಡಂ ಆತನ ಮನೋರಥವು
ಅಂಗಜೇಂಧನವಾದುದಾವಧೂರತವು.

೨೮

ಭೋಗದಂಕಿತಗಳನು ಮುಕುರದೊಳು ನೋಳ್ಪಂದು
ಬಿನದಕೆಂದರಸಿಯರ ಬೆನ್ನ ಬಳಿ ನಿಂದು
ನಗೆಯಿಂದೆ ಚೆಲುವಾದ ತನ್ನ ಪಡಿನೆಳಲಿಂದೆ
ನಾಚಿ ಮೊಗ ತಗ್ಗಿಪಂತೆಸಗುವನು ಭರದೆ.

೨೯

ತಮ್ಮ ನಳಿತೋಳುಗಳನೆಸೆದು ಕೊರಳನು ಬಿಗಿದು
ತುದಿಗಾಲಿನಲಿ ನಿಂದು ದಯಿತೆಯರು ನಲಿದು
ಹಾಸಿಗೆಯನುಳಿದೇಳುವಿನಿಯನನು ಬೇಡುವರು
ಕಡೆಯಿರುಳ ಬೀಳ್ಕೊಳುವ ಚುಂಬನವನವರು.

೩೦

ಪರಿಭೋಗಲಕ್ಷ್ಮಮಂಡನವ ಕಂಡವನೆಂತು
ಮೋದಗೊಂಡುಬ್ಬುವನು ಆ ತರುಣ ನೃಪನು.
ದೇವೇಂದ್ರಶೋಭೆಯನು ಪಳಿವ ನೃಪವೇಷವನು
ಮುಕುರದೊಳು ಕಂಡಂತು ನಲಿಯನವನಿಪನು.

೩೧

ಕೆಳೆಯರುಜ್ಜುಗದೊಂದು ನೆವವಿಡಿದು ಆ ನೃಪನು
ಮತ್ತೊರುವಳೆಡೆಗೆಂದು ತೆರಳಲಿರುವಂದು
ಹೇ ಶಠನೆ ಬಲ್ಲೆವು ಪಲಾಯನಚ್ಛಲವಿದನು
ಎಂದವರು ಗದರಿಪರು ಜುಟ್ಟು ಹಿಡಿದೆಳೆದು.

೩೨

ನಿರ್ದಯರತಿಶ್ರಮದೊಳೊಗೆದೊಂದು ಸೇದೆಯೊಳು
ತರುಣಿಯರು ಪರಿರಂಭಣವ್ಯಾಜದಿಂದೆ
ಪೀವರಸ್ತನಲುಪ್ತಚಂದನದ ವಕ್ಷದೊಳು
ಮಲಗಿದರು ಮೈಮರೆತು ಸಲೆ ಮೋದದಿಂದೆ.

೩೩

ಯಾರುಮರಿಯದವೋಲು ಮಿಲನಕೆಂದಿರುಳಿನೊಳು
ಗುಟ್ಟಿನಿಂದೈದುವುದನಾಳಿಯರಿನರಿದು
ಅಂಗನೆಯರಾತನನು ಕಾಮುಕನೆ ಕತ್ತಲೊಳು
ವಂಚಿಪೆಯ ನಡೆಯೆಂದು ಕರೆತಂದರಂದು.

೩೪

ಚಂದಿರನ ಕರಗಳಿಂದಾಮೋದವಡೆದಂತೆ
ರಮಣಿಯರ ಸೋಂಕಿನೊಳು ಸೊಗವಡೆದು ನಲಿದು
ಇರುಳೊಳೆಚ್ಚರವಾಂತು ಪಗಲು ನಿದ್ದೆಯೊಳಿರುತೆ
ನೈದಿಲೆಯ ಕೊಳದವೋಲಾದನವನಿಪನು.

೩೫

ಉಗುರುಗಾಯದ ತೊಡೆಯೊಳಳವಡಿಸಿ ವೀಣೆಯನು
ಕಚ್ಚಿರುವ ಕೆಳದುಟಿಯೊಳಿಟ್ಟು ವೇಣುವನು
ನುಡಿಸುವಂದರೆನೊಂದು ಕೊಂಕಿಸಿದ ಕಣ್ಣಿನೊಳು—
ಮವನಿಪನು ಮುದಗೊಂಡು ಲೋಭವಾಂತಪನು.

೩೬

ಸತ್ವಾಂಗವಚನಂಗಳಳವಟ್ಟ ನಾಟ್ಯವನು
ಗುಟ್ಟಿನೊಳು ಅರಸಿತಿಯರಿಂದರಿತು ನೃಪನು
ಮಿತ್ರಜನಸನ್ನಿಧಿಯೊಳದನಾಡಿ ತೋರುವನು
ನಾಟ್ಯಗುರುವರ್ಯರೊಳು ಚರ್ಚಿಸುವನದನು.

೩೭

ಕುಟಜಕಕುಭಸ್ರಜಗಳಂಸದೊಳು ತೊನೆವವನು
ನೀಪರಜಮಂಗದೊಳು ತೊಳಗುತಿರುವವನು
ರತಿಕೇಳಿಗೆಳಸುವನು ವರ್ಷದಾರಂಭದೊಳು
ಪ್ರಮದಬರ್ಹಿಗಳೆಸೆವ ಕೃತ್ರಿಮಾದ್ರಿಯೊಳು.

೩೮

ಪ್ರಣಯಕಲಹದೆ ನೊಂದು ಮೊಗದಿರುಹಿದೋಪಳನು
ಸಂತೈಸುವಾತುರವ ತೊರೆವನವನಿಪನು
ಘನಶಬ್ದ ವಿಕ್ಲವೆಯುರಾತನ್ನ ವಕ್ಷವನು
ಮರೆವೊಗುವರೆಂದೆಳಸಿ ತಾಂ ಕೆಮ್ಮನಿಹನು.

೩೯

ಸವಿತಾನಸೌಧದೊಳು ಲಲಿತಾಂಗನಾಸಖನು
ಆ ಶರದ್ರಾತ್ರಿಯೊಳು ವಿರಮಿಸುತಲವನು
ಸುರತದಾಯಾಸವನು ಪರಿಹರಿಸಿಕೊಳ್ಳುವನು
ಘನವಿರಹಿತೋಲ್ಲಸಿತ ಚಂದ್ರಿಕೆಯೊಳದನು.

೪೦

ಕಟಿಯೆಡೆಯ ಮೇಖಲೆವೊಲರಸಂಚೆಯೆಸೆಯುತಿರೆ
ಪೊರವಾರಿನಂದದೊಳು ಪುಳಿನದೆಡೆ ತೋರೆ
ಕಾಂತಾವಿಲಾಸವನು ಅನುಕರಿಪ ಸರಯುವನು
ಹರ್ಮ್ಯಜಾಲಂಧ್ರಗಳಿನೀಕ್ಷಿಪನು ನೃಪನು.

೪೧

ಅಗರುಧೂಪದ ಹೊಗೆಯ ಮರ್ಮರದ ಗರಿಮುರಿಯ
ಹೇಮಮಯಮೇಖಲೆಯ ಹೊಳೆಹೊಳೆವ ಸಿರಿಯ
ಹೇಮಂತವಸನದಿಂದೆಳೆವರಸಿಮಧ್ಯೆಯರು
ನೀವೀವಿಮೋಚನಾಸಕ್ತನನು ಅವರು.

೪೨

ಸರ್ವಸುರತಾಂತರಕ್ತಮುಗಳೆನಿಪಾಕ್ಷಪೆಗ—
ಳಚಲದೀಪಾಕ್ಷಿಗಳಿನೀಕ್ಷಿಸುತಲಂದು
ಅನಿಲನಾಂದೋಳವಿರದಂತವುರದೆಡೆಗಳೊಳು
ನರಪತಿಯ ತತ್ಕೃತಿಯ ಸಾಕ್ಷಿವೋಲಿಹವು.

೪೩

ತೆಂಕಣೆಲರಿಂದೊಗೆದ ಮಾವಿನೆಳೆನನೆಕೊನೆಯ
ನೋಡಿದಬಲೆಯರಂದು ತಾಳದಗಲಿಕೆಯ
ಪ್ರಣಯ ಕೋಪವನುಳಿದು ಬಯಸಿದರು ಲಗುಬಗೆಯ
ತಳೆದವರು ತಾವೆ ಬಂದವನಿಪನ ಕೆಳೆಯ.

೪೪

ತೊಡೆಯ ಮೇಲರಸಿಯರ ಕುಳ್ಳಿರಿಸಿಕೊಂಡವನು
ಪರಿಜನರು ತೂಗುವುಯ್ಯಾಲೆಯೊಳು ಕುಳಿತು
ಹಗ್ಗ ಹರಿವಂದದೊಳು ತೂಗುತಿರಲಬಲೆಯರು
ಹೆದರಿ ತೋಳ್ಗಳನೆಸೆದು ಕೊರಳನಪ್ಪುವರು.

೪೫

ಚಂದನವ ತೊಡೆದಿರುವ ಕೊಡವೊಲೆಗಳಬಲೆಯರು
ಮುತ್ತಿನಾಭರಣಗಳ ಧರಿಸಿದಬಲೆಯರು
ರತ್ನಮಯ ಕಾಂಚಿಯನು ಪೊರವಾರೊಳಾಂತವರು
ಗ್ರೀಷ್ಮವೇಷಂಗಳಿಂದವನನೊಲಿಸಿದರು.

೪೬

ರಕ್ತಪಾಟಲಕುಸುಮದಾಸವವನೀಂಟಿದನು
ಆಮ್ರಪಲ್ಲವಯುತವನವನಿಪನು ತಾನು
ಚೈತ್ರನಪಗಮನದಿಂದತಿಸೊರಗಿದಾ ಅತನು
ಮರಳಿ ಬಲಯುತನಾದನಾತನಂಗಜನು.

೪೭

ಮದನಚೋದಿತನಿಂತು ಅನ್ಯಕರ್ಮವನುಳಿದು
ಇಂದ್ರಿಯ ಸುಖಂಗಳೊಳಗದ್ದಿತಿರುವಂದು
ಋತುಪರಂಪರೆಗಳನು ತಾನರಿತುಕೊಳುತಿಹನು
ಧರಿಸಿರುವ ಕುಟಜಾದಿ ಹಾರದಿಂದವನು.

೪೮

ಅತಿಮತ್ತನಾದರೂ ನಿಜಮಹಿಮೆಯಿಂದವನು
ಅನ್ಯರ ಪರಾಭವಕೆ ಗುರಿಯಾಗದಿಹನು
ಭೋಗಭವರೋಗದಿಂದಾದರೂ ಸೊರಗಿದನು
ದಕ್ಷಶಾಪಗ್ರಸ್ತಚಂದ್ರನೊಲು ನೃಪನು.

೪೯

ದೋಷಯುತವೆಂದರಿತ ಮದ್ಯಾದಿಗಳ ಬಿಡನು
ಭಾವಿಸನು ಭೇಷಜರ ನುಡಿಗಳನುಮಂತೆ
ಪ್ರಿಯವಿಷಯಸುಖಗಳಿಂದಿಂದ್ರಿಯ ಗಣಂಗಳನು
ಸೆಳೆದಿತ್ತಲೈದುವುದು ಕಠಿಣತರಮಲ್ತೆ.

೫೦

ಬೆಳ್ಪಿಡಿದ ಮೊಗದಿಂದೆ ಕುಗ್ಗಿರುವ ದನಿಯಿಂದೆ
ಮಿತವಾದ ಮೈಮೇಲಿನಾಭರಣದಿಂದೆ
ಹೆರರ ಕೈಹಿಡಿದೊಯ್ಯನಡಿಯಿಡುವ ನಡೆಯಿಂದೆ
ಕಾಮಿವೊಲು ಕೊರಗಿದನು ಕ್ಷಯರೋಗದಿಂದೆ.

೫೧

ಕೊನೆಯ ಕಲೆಯೊಂದುಳಿದ ಶಶಿಯೆಸೆವ ಬಾನಿನೊಲು
ಕೆಸರುಳಿದ ಬೇಸಗೆಯ ಪೆರ್ಮಡುವಿನೋಲು
ಕಿರುಗದಿರ ಕುಡಿಯಾಡುತಿರುವ ಹೆಜ್ಜೊಡರಿನೊಲು
ತಾನಾದುದನ್ವಯವು ಕ್ಷಯದರಸನಿರಲು,

೫೨

ರೋಗವನು ಬೈತಿರಿಸಿದವನಿಪನ ಮಂತ್ರಿಗಳು
ವ್ಯಸನಶಂಕಿನಿಜನರಿಗೊರೆದರಿರದಂದು
ಪುತ್ರಾರ್ಥಮವನಿಪನು ನಿತ್ಯವೂ ತೊಡಗಿಹನು
ಕರ್ಮಗಳಲೀಮಾತು ಸತ್ಯವಹುದೆಂದು.

೫೩

ಅಮಿತವನಿತಾಸಖನು ತಾನಾದರೂ ನೃಪನು
ಅಮಳಸಂತಾನವನು ಕಾಣದಿರುವವನು
ವೈದ್ಯರೌಷಧಗಳಿಂದುಡುಗದುರುರುಜೆಯಾಂತು
ಗಾಳಿಗೊಡ್ಡಿದ ಸೊಡರಪೋಲಾದನಂತು.

೫೪

ಪಶ್ಚಿಮಕ್ರತುವಿದಪುರೋಹಿತನನೊಡವೆರೆದು
ರೋಗಶಾಂತಿಕ್ರಿಯಾವ್ಯಾಜದಿಂದಂದು
ಆ ಗೃಹಾರಾಮದೊಳೆ ಭುಗ್ಗನುರಿದಗ್ನಿಯೊಳು
ಗುಟ್ಟನಿಂದುರಿಸಿದರು ನೃಪನ ವಪುವದನು.

೫೫

ಅಗ್ನಿವರ್ಣನ ಪತ್ನಿಯೊರ್ವಳಂತರ್ವತ್ನಿ—
ಯೆಂದರಿತು ಪುರಜನಪ್ರಮುಖರನು ಕರೆದು
ಮಂತ್ರಿಜನಮುಖ್ಯರ್ಕಳೆಲ್ಲರಾಲೋಚಿಸುತೆ
ಪಟ್ಟವನು ಕಟ್ಟಿದರು ಆ ತಾಯಿಗಂದು.

೫೬

ಅಂಥ ದೊರೆಯನು ಕಳೆದುಕೊಂಡೊಂ
ದಳಲಬೇಗೆಯೊಳಿಳಿದ ಬೆಚ್ಚನೆ
ಕಣ್ಣಹನಿಗಾ ಮೊದಲು ತಪಿಸಿದ ಬಸಿರದು
ಶೀತಲತೆಯನು ಪಡೆದುದಂದಾ
ಕನಕಕುಂಭಗಳಿಂದಲಿಳಿಯುವ
ತಣ್ಣಿತಹ ವಂಶಾಭಿಷೇಕೋದಕದೊಳು.

೫೭

ಪ್ರಸವಸಮಯಾಕಾಂಕ್ಷಿಯಾದಾಪ್ರಜರ ಸಂಪದದೇಳ್ಗೆ ಸಾಧಿಪ ಬಗೆಯೊಳು
ಶ್ರಾವಣದೊಳೂರಿರುವ ಹಿಡಿಬೀಜವನು ತಳೆದಿಳೆಯಂತೆ ಗರ್ಭವ ತಳೆದು ತನ್ನಾಪೊಡೆಯೊಳು
ಮಣಿಸಿ ತನ್ನಾಣತಿಯೊಳೆಲ್ಲರನಂದು ವೃದ್ಧಾಮಾತ್ಯವೃಂದದ ನೆರವೊಳು
ಹೇಮಸಿಂಹಾಸನವನೇರಿದ ರಾಣಿ ತನ್ನಾಪತಿಯ ರಾಜ್ಯವ ಕ್ರಮದಿನಾಳುತೆ ಪೊರೆದಳು.

---

# ಪ್ರೊ. ಎ. ಆರ್. ಕೃಷ್ಣಶಾಸ್ತ್ರೀ
# ಅವರ ಕೃತಿ ರತ್ನಗಳು

## ವಚನ ಭಾರತ

ಸಂಸ್ಕೃತ ಮಹಾಭಾರತದ ಹದಿನೆಂಟು ಪರ್ವಗಳ ಸಾರ ಸಂಗ್ರಹ. ತಿಳಿಗನ್ನಡ ಗದ್ಯ ದಲ್ಲಿದೆ. ಪುಟಗಳು ೫೦೦.

ಬೆಲೆ ೬-೮-೦

## ಕಥಾಮೃತ

ಸೋಮದೇವ ಕವಿ ಸಂಸ್ಕೃತದಲ್ಲಿ ಬರೆದಿರುವ 'ಕಥಾಸರಿತ್ಸಾಗರ'ದ ಕನ್ನಡದ ಅನುವಾದ. ತಿಳಿಗನ್ನಡ ಗದ್ಯದಲ್ಲಿದೆ. ಸುಂದರವಾಗಿ ಅಚ್ಚಾಗಿದೆ. ಪುಟಗಳು ೬೦೦

ಬೆಲೆ ೭-೮-೦

## ಭಾಸಕವಿ

ಭಾಸಕವಿಯ ಹದಿನಾಲ್ಕು ನಾಟಕಗಳ ಅತ್ಯುತ್ತಮವಾದ ವಿಮರ್ಶೆಯ ಗ್ರಂಥ.

ಬೆಲೆ ೩-೮-೦

ಪ್ರತಿಗಳು ನಮ್ಮಲ್ಲಿ ಸಿಕ್ಕುತ್ತವೆ.